|| ಓಂ ತತ್ಸತ್ ||

# ಷಾಸೂತ್ರವಿಮರ್ಶ

ಪಂಡಿತ

ೀ ಕಲಿಗಣನಾಥಶಾಸ್ತ್ರಿ ತರ್ಕತೀರ್ಥ

ಕೃತ

೧೯೩೧

ಇಸ್ವಿ

ಶ್ರೀ

ಗುರುಲಿಂಗ ಜಂಗಮಾಃ ಪ್ರಸೀದಂತು.

ಬಾಗಲಕೋಟೆ ಶ್ರೀಬಸವೇಶ್ವರ ವಿದ್ಯಾವರ್ಧಕ ಸಂಘದ ಸಂಸ್ಕೃತ
ಪಾಠಶಾಲಾ ಪ್ರಧಾನಾಧ್ಯಾಪಕರಾದ ಪಂಡಿತ ಕಲಿ
ಗಣನಾಥಶಾಸ್ತ್ರಿ ಪಂಚಾಕ್ಷರಶಾಸ್ತ್ರಿ ತರ್ಕತೀರ್ಥ
ಪಗಡದಿನ್ನಿ ಬೃಹನ್ಮಠ ಇವರಿಂದ
ವಿರಚಿತವಾದ

# ಶಿಖಾ ಸೂತ್ರ ವಿಮರ್ಶ.



ಪ್ರಥಮ ಮುದ್ರಣ
(೧೦೦೦ ಪ್ರತಿಗಳು)

ಶಕೆ
೧೮೫೩

ಕ್ರಯ ೮ ಆಣೆ.



ಶ್ರೀಮದುಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರ ವೀರಶೈವ
ಜಗದ್ಗುರು ೩೯ರ ಪಟ್ಟಾಧ್ಯಕ್ಷ ಶಿವಾನುಭವ ಶ್ರೀಮನ್ಮರುಳ
ಸಿದ್ಧರಾಜದೇಶಿಕೇಂದ್ರ ಮಹಾಸ್ವಾಮಿಗಳು.

# ಅನುಕ್ರಮಣಿಕೆ.

## ಪ್ರಥಮದಲ್ಲಿ ಗುರಿವಿನ ಮಂಗಲ.

ಸತ್ವ ರಜ ಸ್ತಮೋಗುಣಗಳನ್ನೊಳಕೊಂಡಿರುವ ನಿನ್ನಯಿಚ್ಛೆಯೆ ಇಷ್ಟಲಿಂಗವಾಗಿಯು ಸರ್ವಕ್ಕು ಈಶೇಷನೆ ಆಧಾರಸ್ವರೂಪನಾದ್ದೆಂದು ಈ ತತ್ವಕ್ಕೆ ನಕಾರ ಪ್ರಣಮವೆಂಬ ಸೌಂಜ್ಞೆಯಂ ಕೊಟ್ಟು ಸಪ್ತಸಮುದ್ರಗಳು ನಿನ್ನಕರುಣಾಸಮುದ್ರದಿಂದಾದವುಗಳೆಂದು ಈತತ್ವಕ್ಕೆ ಮಕಾರ ಪ್ರಣಮವಂ ಗುರ್ತಿಟ್ಟು ಸರ್ವ ಕರ್ಮಗಳೆಂಬ ಕಾಷ್ಟಗಳಂ ಸುಟ್ಟಿರುವ ಜ್ಞಾನ ಜ್ಯೋತಿಯು ನಿನ್ನನೇತ್ರಬಿಂಬುವಿನಿಂದಾದುದೆಂದು ಇದಕ್ಕೆ ಶಿಕಾರಪ್ರಣಮವಂ ಕಲ್ಪಿಸಿ ವಾಯುವು ನಿನ್ನ ಸ್ವಾಸೋಛ್ವಾಸಗಳಿಂದಾದುದೆಂದು ಈ ತತ್ವಕ್ಕೆ ವಕಾರಪ್ರಣವಮುಂನಿರ್ನೈಸಿ ಆಕಾಶವುನಿನ್ನಹೃದಯದಿಂದಾದುದೆಂದು ಈ ತತ್ವಕ್ಕೆ ಯಕಾರ ಪ್ರಣಮವಂ ಪ್ರತಿಷ್ಟಿಸಿ ಈ ಪಂಚಪ್ರಣಮಗಳು ಉತ್ಪತ್ತಿಯಾಗಿರುವ ಓಂಕಾರ ಪ್ರಣಮಸ್ವರೂಪವೆ ನೀನೆಂತ ಯೇಕದೇಶವರ್ತಿಯಾದ ಕಸ್ತೂರಿಯಂತೆ ನೀನು ಅಣುಪರಿಮಾಣಉಳ್ಳ ಮಹತ್ತುವು ಮತ್ತು ಜಗದ್ವ್ಯಾಪಕನಾಗಿದ್ದಿ ಯೆಂಬ ಉಪನಯನವಂ ೧೧ ನೆ ವರ್ಷದಲ್ಲಿ ಕೈಯಲ್ಲಿ ತೋರಿಸಿಕೊಟ್ಟ ಶ್ರೀಗುರು ಚರಪಟ್ಟಾಧ್ಯಕ್ಷ ಗುರುಸಿದ್ಧಸ್ವಾಮಿಗೆ ನಮಸ್ಕಾರವು. ಶಂಕರ. ಗೌರಿ.



ಶಂಕರ. ಗೌರಿ.

ಈ ಗೌರೀ ಶಂಕರನು ತುಟಿಯುಂ ತೆಗೆದರೆ ಅಕಾರವು, ತುಟಿ ಮುಚ್ಚಿ ಮೂಗು ತೆಗೆದರೆ ಉಕಾರವು, ತುಟಿ ಮೂಗು ಮುಚ್ಚಿದರೆ ಮಕಾರವು. ಅಂದರೆ ಮೌನವು ಜ್ಞಾನ ಧ್ಯಾನ ಮೌನ ಇವು ಮೂರು ಒಂದು ಸೊನ್ನಿಗುರ್ತು ಇದೇ ಶೇಷವು. ಈ ಆತ್ಮ ಶೇಷನೆ ಇಚ್ಛಾಮಾತ್ರದಿಂ ಮಹಂತ ನಾಗಿರುವನು. (ಮಃ) (ಹಂ) (ನಾ) ತಾನಾಗಿರುವನು. ಓಂನಮಃ ಇ ಅ ಉ ಮಾಕ್ಷರಗಳು ಕೂಡಿದ ಓಂಕಾರಕ್ಕೆ ಟಕಾರ ವಾಗುವದೆಂದು ಕೆಲವರು ಹೇಳುವರು. ಇದು ಹ್ಯಾಗಾಗುವದೆಂದರೆ ಶೂನ್ಯವಾದಿಗಳಿಗೆ ನಿರಾಕಾರವಾಗಿಯು, ಈಶ್ವರವಾದಿಗಳಿಗೆ ಸಾಕಾರವಾಗಿಯು ತೋರಿದಂತೆ ದುರ್ಭಾವನವುಳ್ಳವರಿಗೆ ಟಕಾರ ವಾಗಿಯು ಸದ್ಭಾವವುಳ್ಳವರಿಗೆ ಓಂಕಾರವಾಗಿಯು ತೋರುವದು. ಟಕಾರಿಕೆ ತನನಂಬಿದ್ದ್ನಿ ಸದ್ವರ್ತನೆಯುಂ ತೋರಿಸಿಕೊಡುವವರೆ ಸದ್ಗುರುಗಳು ಇಗೋ ಇದು ಟಕಾರವು ಇದರಲ್ಲಿ ಅ ಉಮಾಕ್ಷರಗಳು ಇಲ್ಲ ಆ ಉಮಾಕ್ಷರವೆ ಓಂಕಾರ ವ್ಯಕ್ತಾವ್ಯಕ್ತವಾಗಿ ಇರುವದು.








ಈ ಶಿಕಾರವು ಅಗ್ನಿತತ್ತ್ವವು. ಜ್ಞಾನಾಗ್ನಿಯು ಮತ್ತು ಜ್ಞಾನಾಮೃತವು ಈ ಶಿಕಾರವು ಮೃಡಶಿಸು ಮೃಡ ಅಂದರೆ ಶಿವಸುಖಸ್ವರೂಪು ಈಶಿಸು ಅಮೃತಸ್ವರೂಪು. ಅಮೃತವೇ ಐಶ್ವರ್ಯವು. ಈಐಶ್ವರ್ಯವು ಮಂದೇಹತ್ತಿರ ನಿಲ್ಲದೆ ಚಲನಾತ್ಮಕವಾಗಿ ಸುತ್ತಿಬರುವದರಿಂದ ಈ ಶಿಕಾರಕ್ಕೆ ಕರಾವಳಿಯಾಗಿ ಶ್ರೀಕಾರವಾಗಿರುವದು. ಈಶ್ರೀಕರಕ್ಕೆ ಎರಡು ಮುಖ ಇರುವವು. ಅಂದರೆ ಜ್ಞಾನಕ್ಕೆ ಎರಡು ಮುಖಗಳು.

ಅಧೋಮುಖ ಒಂದು, ಊರ್ಧ್ವಮುಖ ಒಂದು, ವ್ಯವಹಾರ ಮುಖವೇ ಅಧೋಮುಖ. ಪಾರಮಾರ್ಥಿಕ ಮುಖವೆ ಊರ್ಧ್ವ ಮುಖ. ಅಧೋಮುಖದಲ್ಲಿ ಐದು ಶಕ್ತಿ ಪೀಠಗಳು. ಊರ್ಧ್ವ ಮುಖದಲ್ಲಿ ಐದು ಭಕ್ತಿಪೀಠಗಳು ಇರುವವು. ಇವುಗಳ ವಿವರ ವೇನಂದರೆ ಲೌಕೀಕ ದಶಯಲ್ಲಿ (೧) ಅನಂತಪುಷ್ಪಗಳಿಂದ ಕೂಡಿದ ಪರಿಮಳದಂತೆ ಮಹಂತನಿಂದ ಕೂಡಿದ ಪ್ರಪಂಚಕ್ಕೆ ಆಧಾರ ಭೂತವಾಗಿರುವ ಲಕ್ಷ್ಮೀರೂಪವಂಧರಿಸಿರುವ ಕ್ರಿಯಾ ಶಕ್ತಿಯು, ಇದಕ್ಕೆ ತಿರುಪತಿ ಕ್ಷೇತ್ರವೇ ಗುರ್ತು. (೨) ಅನಂತ ರಸಗಳಿಂ ಕೂಡಿದ ರುಚಿಯಂತೆ ವಿರೂಪಾಕ್ಷನಿಂಕೂಡಿದ ಕ್ರಿಯಾಶಕ್ತಿಗ ಆಧಾರಭೂತವಾಗಿರುವ ಚಿದ್ವಿಲಾಸ ರೂಪವಂ ಧರಿಸಿರುವ ಪಾರ್ವತಿ ಎಂಬ ಜ್ಞಾನ ಶಕ್ತಿಯು ಇದಕ್ಕೆ ಪಂಪಾ ಕ್ಷೇತ್ರವೇ ಗುರ್ತು. (೩) ಅನಂತ ವರ್ಣಗಳಿಂ ಕೂಡಿದ ರೂಪಿನಂತೆ ಬ್ರಹ್ಮನಿಂಕೂಡಿದ ಜ್ಞಾನ ಶಕ್ತಿಗೆ ಆಧಾರಭೂತವಾಗಿರುವ ಅನಂತ ವಿದ್ಯಾರೂಪವಂ ಧರಿಸಿರುವ ಸರಸ್ವತಿ ಯೆಂಬ ಇಚ್ಛಾ ಶಕ್ತಿಯು ಇದಕ್ಕೆ ಶ್ರಿಂಗೇರಿ ಕ್ಷೇತ್ರವೇ ಗರ್ತು. (೪) ಅನಂತ ಸ್ಪರ್ಶಗಳಿಂಕೂಡಿದ ವಾಯುವಿನಂತೆ ಈಶ್ವರನಂಕೂಡಿದ ಇಚ್ಛಾಶಕ್ತಿಗೆ ಆಧಾರಭೂತವಾಗಿರುವ ಶಾಂತಿರೂಪವಂ ಧರಿಸಿರುವ ಭದ್ರಿಯೆಂಬ ಚಿಚ್ಛಕ್ತಿಯು ಇದಕ್ಕೆ ಕೇದಾರ ಕ್ಷೇತ್ರವೇ ಗುರ್ತು. (೫) ಅನಂತ ಶಬ್ದವೈಖರಿಗಳಿಂಕೂಡಿದ ನಾದದಂತೆ ವಿಶ್ವೇಶ್ವರನಿಂಕೂಡಿದ ಚಿಚ್ಛಕ್ತಿಗೆ ಆಧಾರಭೂತವಾಗಿರುವ ವಿಶ್ವರೂಪವಂ ಧರಿಸಿರುವ ಅನ್ನಪೂರ್ಣೆಯೆಂಬ ಮಾಯಾ ಶಕ್ತಿಯು ಇದಕ್ಕೆ ಕಾಶೀಕ್ಷೇತ್ರವೇ ಗುರ್ತು. ಇನ್ನು ಪಾರಮಾರ್ಥ ದಶೆಯಲ್ಲಿ (೧) ಮೋಕ್ಷ ಲಕ್ಷ್ಮಿಯಂ ಧರಿಸಿದ ಚಿನ್ಮಯನು

ಶ್ರೀಗಿರಿ ಪೀಠದಲ್ಲಿ ಮಹಂತ ಮಲ್ಲಯ್ಯನೆನಿಸಿ ಶ್ರೀಶೈಲ ಕ್ಷೇತ್ರ ನೆಂಬ ಘಟದಲ್ಲಿ ಆತ್ಮನಿರುವನು. ಇದಕ್ಕೆ ಶಿವರಾತ್ರಿ ಉತ್ಸವ ಗುರ್ತು. ೨ ವಾಸುದೇವೋ ಮಹಾದೇವ | ವಿರೂಪಾಕ್ಷ ತ್ರಿ ಲೋಚನ|| ಈವಿರೂಪಾಕ್ಷನು ಜ್ಞಾನಶಕ್ತಿಯಂ ಧರಿಸಿದ ಅ ಉ ಕಾರವಂ ಜೈಸಿದ ಉಜ್ಜಯಿನೀ ಸುಕ್ಷೇತ್ರವೆಂಬ ಸದ್ಧರ್ಮ ಪೀ ಠದಲ್ಲಿ ಹೃದಯ ಕಮಲದೊಳಗೆ ವಿಷಯದಿಂ ಕೂಡಿದಾಗ್ಯೂ ದ್ವಾದಶಾಂಗುಲದ ವೃಶ್ಚಿಕವು ಚಿತ್ತವಿಕಾಸದಿಂದ ಶುಭ್ರವಾಗಿ ಈಗಲೂ ಇರುವದು. ೩ ಇಚ್ಛಾಶಕ್ತಿಯಂ ಧರಿಸಿದ ಪರಕಾ ಯ ಪ್ರವೇಶನಾದ ಆತ್ಮಕೇಶನು ಜನ್ಮಪರಂಪರೆಯನ್ನು ಬಿಚ್ಚು ವ ಆನಂದದಲ್ಲಿರುವನು. ರಂಭಾಪರಿ ಪೀಠವೆಗುರ್ತು. ೪ ಚಿ ಚ್ಛಕ್ತಿಯಂ ಧರಿಸಿದ ಮನವೆಂಬ ಜಲಕಣವು. ಘಟ್ಟಗೊಂಡಿರು ವದಕ್ಕೆ ಕೇದಾರ ಪೀಠವೇ ಗುರ್ತು. ೫ ಮಾಯಾಶಕ್ತಿಯಂ ಧರಿಸಿದ ವಿಶ್ವೇಶ್ವರನು ಕಾಶಿಕ್ಷೇತ್ರದಲ್ಲಿ ವಿಶ್ವರಾಧ್ಯಪೀಠದಲ್ಲಿರು ವನು.

## ತ್ರಿ ಪು ಟಿ ಗ ಳು.

ಜ್ಞಾತೃವೆಂಬ ಜೀವನು ಜ್ಞಾನವೆಂಬ ದರ್ಪಣದಲ್ಲಿ ಜ್ಞೇ ಯವೆಂಬ ಸ್ವರೂಪವನ್ನು ನೋಡುತ್ತಿರುವನು. ಧ್ಯಾತೃವೆಂಬ ಇಚ್ಛೆಯು ಧ್ಯಾನವೆಂಬ ದರ್ಪಣದಲ್ಲಿ ಧ್ಯೇಯವೆಂಬ ಸ್ವರೂಪ ವಂ ನೋಡುವದು. ಸ್ವಾನುಭಾವಿಯು ಸ್ವಚ್ಛವಾದ ಅರುವಿನ ಲ್ಲಿ ತನ್ನ ಸ್ವರೂಪವನ್ನು ನೋಡುವನು. ಈಶ್ವರನು ಇಚ್ಛೆಯಂ ಬ ದರ್ಪಣದಲ್ಲಿ ಜಗತ್ತೆಂಬ ತನ್ನ ಸ್ವರೂಪವನ್ನು ನೋಡುವ ನು. ಇದರಂತೆ ಧ್ಯಾತೃವೆಂಬರಾಜನು ಧ್ಯಾನವೆಂಬ ದರ್ಪಣ

ದಲ್ಲಿ ಧ್ಯೇಯವೆಂಬ ತನ್ನಜಗತ್ತನ್ನು ನೋಡುವನು. ರಾಜನು ಭೂಭಾರವನ್ನು ತಲೆಮೇಲೆ ಇಟ್ಟುಕೊಂಡು ಲೀಲೆಯಿಂದ ನಡಿಯುವನು. ಅಂದರೆ ಕರ್ತೃವಾದ ರಾಜನು ರಾಜ್ಯವನ್ನು ತನ್ನ ತಲೆಯಲ್ಲಿರುವ ಆಲೋಚನೆಯಲ್ಲಿ ಅಂದರೆ ಜ್ಞಾನಚಕ್ಷುವಿನಲ್ಲಿ ಟ್ಟುಕೊಂಡು ಕಾರ್ಯಗೌರವ ಭಾರವನ್ನು ತನ್ನ ಲೀಲೆಯಿಂದ ನಡಿಸುವನು. ಒಂದು ಕಾಲದಲ್ಲಿ ಕೈಯಲ್ಲಿಟ್ಟುಕೊಂಡು ಸಿಯಾಮಕತ್ವದಿಂದ ಭೋಕ್ತೃವಾಗಿ ಇಷ್ಟಾರ್ಥವಂ ಹೊಂದುವನು. ಮತ್ತೊಂದುಕಾಲದಲ್ಲಿ ವಿಶ್ವವೇ ನನ್ನ ಪ್ರಾಣವೆಂದು ತನ್ನಗರ್ಭದಲ್ಲಿಟ್ಟುಕೊಂಡು ತೃಪ್ತಿಯಂಹೊಂದಿ ತಾನು ಸಾಕ್ಷಿಯಾಗಿ ಸುಷುಪ್ತಿ ಸುಖವಂ ಅನುಭವಿಸುವನು. ಹ್ಯಾಗಂದರೆ ಜನಗಳು ಗಳಿಸಿದ ದ್ರವ್ಯವನ್ನು ಗೋಪ್ಯಸ್ಥಾನದಲ್ಲಿಟ್ಟುಕೊಂಡು ಬೀಗವು ಧ್ರಿಯನ್ನು ಭದ್ರಮಾಡಿ ಕೈಯನ್ನು ಹಿಂದೆ ತೆಗದುಕೊಂಡು ಹೋದಂತೆ ತಾನೆಲ್ಲಿದ್ದರು ಜಗತ್ತನ್ನು ತನ್ನ ಕೈಯಲ್ಲಿಟ್ಟುಕೊಂಡಿರುವನು. ಇದರಂತೆ ಈಶ್ವರನು ಸಹ ದೃಶ್ಯವನ್ನೆಲ್ಲ ತನ್ನಕೈಯಲ್ಲೆ ಇಟ್ಟುಕೊಂಡಿರುವನು. ಇದರಂತೆ ಸ್ವಾನುಭಾವಿಯು ಜ್ಞಾನವೆಂಬ ಭಾವಲಿಂಗವನ್ನು ತನ್ನ ತಲೆಯಲ್ಲಿಟ್ಟುಕೊಂಡು ಲೀಲೆಯಿಂ ನಡಿಯುವನು. ಇದನ್ನೆ ಇಷ್ಟಲಿಂಗವನ್ನಾಗಿ ಕೈಯಲ್ಲಿಡಿದುಕೊಂಡು ಇಷ್ಟಾರ್ಥವಂ ಅನುಭವಿಸುವನು. ಒಂದುಕಾಲದಲ್ಲಿ ನನ್ನ ಹೊರತು ಅನ್ಯವೆ ಇಲ್ಲವೆಂಬ ಶಾಂತಿಯಿಂದ ಹೃದಯಕಮಲದಲ್ಲಿ ಪ್ರಾಣಲಿಂಗವನ್ನಾಗಿ ಇಟ್ಟುಕೊಂಡು ಚಿತ್ತಶ್ರಾಂತಿಯಂ ಹೊಂದುವನು. ಇದಕ್ಕೇನೇ ಸಮಾಧಿಯನ್ನುವದು. ಜಗಧೀಶ್ವರನಿಗೆ ಪೂರ್ವಮುಖವಾಗಿರುವ ಸಿದ್ಧಿ, ವೃದ್ಧಿ, ಧೃತಿ, ಲಕ್ಷ್ಮಿ, ಮೇಧ, ಕಾಂತಿ, ಮತಿ, ಸ್ವಾಧು ಈಲ ಕಳೆಗಳಿಂದ

ಕೂಡಿದ ಸದ್ಯೋಜಾತ ಮುಖದಿಂದುದ್ಭವಿಸಿದ ಪಂಡಿತಾರಾ ಧ್ಯನು ಕ್ರಿಯಾಶಕ್ತಿಯಿಂ ಸದಾನಂದ ರೂಪನಾಗಿ ಶ್ರೀಗಿರಿ ರಾಜ ಸೂಂಪರ್ಣ ಸಿಂಹಾಸನವೆಂದು ಪೂರ್ವದಿಕ್ಕಿನಲ್ಲಿ ತಮ್ಮ ಸಿಂಹಾಸ ನದ ಗುರ್ತನ್ನು ಸ್ಥಾಪಿಸಿರುವರು. ಜಗಧೀಶ್ವರನ ಮರತು ಪೋಗಿರುವ ಮರ್ತ್ಯಲೋಕದ ಮನುಜರ ಮಾಂಸಪಿಂಡವಂ ಅಳಿದು ಮಂತ್ರಪಿಂಡವನ್ನಾಗಿ ಮಾಡಬೇಕೆಂಬ ಉಲ್ಲಾಸದಿಂದ ವೃಕ್ಷಕ್ಕೆ ಲತೆಯು ಸುತ್ತಿಕೊಂಡಂತೆ ಮಾಂಸಪಿಂಡಗಳಿಗೆ ಉ ಪಾಧಿಯು ಸುತ್ತಿಕೊಂಡಿರುವದನ್ನ ಬಿಡ್ಸಿ ಆಧಾರಚಕ್ರವೆಂದರೆ ಲಕ್ಷ್ಮಿ ಚಕ್ರ ಈ ಚಕ್ರವು ಯಾವಾಗ್ಯು ತಿರುಗುತ್ತಿರುವದು. ಇಂಥಾ ಚಕ್ರದಲ್ಲಿ ಬಿದ್ದು ಪ್ರಾಣವಂ ಬಿಡುವವರನ್ನ ಕಡೆಗೆ ತೆ ಗದು ಉದ್ಧಾರಮಾಡಿದ್ದರಿಂದ ಜಗದ್ಗುರುವೆಂಬ ನಾಮವಂ ಪ ಡದು ಈತನ ವಾಕ್ ಪ್ರಸಾದದಿಂದ ತೃಪ್ತಿಯಂಹೊಂದಿ ಕೃತ ಕೃತ್ಯನಾಗುವವರಿಂದ [ಪ್ರಸಾದ - ಶ್ರೋತ್ರ] ಪ್ರಸಾದಲಿಂಗ ಶ್ರೋತ್ರಂಗೆಸೂಕ್ಷ್ಮಗಮ ಅ ಶ್ಲೋಕ ಅ೫ ಪುಟ [ವಾಕ್‌ಗುರು] ಈ ಎರಡು ವರ್ಣಗಳಿಂಕೂಡಿದ ಉಪದೇಶವಂ ಮಾಡುವನು. ಮತ್ತು ಬೀಜ ವೃಕ್ಷ ನ್ಯಾಯದಂತೆ ಹೇಳುವ ಗುರುವಿಗು ಕೇ ಳುವ ಶಿಷ್ಯನಿಗು ಅಭೇದವಂತೋರಿ ಭ್ರಮರವು ಸಂಪಿಗೆಯ ಪುಷ್ಪದ ಗಂಧಕ್ಕೆ ಎರಗಿ ಸತ್ತಂತೆ ನೀನು ಪ್ರಕ್ಟಂದನ ಧನ ವ ನಿತಾದಿ ವಿಷಯಗಳಿಗೊಳಗಾಗಿ ಕೆಡುವದು ಉಚಿತವಲ್ಲ. ಅಭಿ ಮಾನದಿಂಕೂಡಿದ ದೇಹವು ಗೂಬೆ ಸೇರಿದ ಮನಿಯಂತೆ ಶೀಘ್ರ ದಲ್ಲಿ ಹಾಳಾಗುವದು. ಇದಕ್ಕೆ ಮೂಲವಾಗಿರುವ ಸಂಕಲ್ಪ ವಂ ತೆಜಿಸಿದರೆ ಅಹಂಕಾರವು ನಿಶ್ಶೇಷವಾಗಿ ಹೋಗುವದು. ಚಿ

ತ್ರಕ್ಕೆ ವಿಶ್ರಾಂತಿಯೆ ಸಮಾಧಿ ಯೆನಿಸುವದು. ಇವನ ನ್ಯಾಯು ದೋಷಗಳುಬಾಧಿಸಲಾರವು. ಗುರುವೇ! ಸಂಕಲ್ಪವೆಂದರೇನು; ಗುರು ಶಿಷ್ಯರಿಗು ಭೇದವಿಲ್ಲವೆಂದರೇನು? ಹೇಳುವನಿಗು ಕೇಳುವನಿಗು ಭೇದವಿಲ್ಲವೆಂದರೇನು ? ರುಂಡವೆ ಗುರುವುುಂಡವೆ ಶಿಷ್ಯ ರುಂಡವು ರುಚಿಸಿದ್ದೆ ಮುಂಡಕ್ಕೆ ಪ್ರೀತಿಯಾಗಿರುವದು. ಹೇಳುವದು ಬಾಯಿ, ಕೇಳುವದು ಕಿವಿ, ಬಾಯಿ ಇದ್ದರೆ ಕಿವಿಇರುವದು. ಮೂಕನಿಗೆ ಕಿವುಡ ನೆಸ್ನುವರು. ಪೃಥ್ವಿ ತತ್ವ ಘಟವಾದ್ದರಿಂದ ಖಂಡಖಂಡವಾಗಿ ಅಖಂಡನಾಗಿರ್ಪವನು. ಇನ್ನು ಸಂಕಲ್ಪವಿಷಯುವನ್ನು ಹೇಳುವೆನು ದೇಹವೇ ನಾನೆಂಬುವದು ಕಲ್ಪನೆಯಾಗಿರುವದು. ಈಕಲ್ಪನೆ ಇರುವವರಿಗು ವರ್ಣಾಶ್ರಮಾಚಾರ ಜ್ಞಾನವು ಆಧಿವ್ಯಾಧಿಗಳು ತಪ್ಪಲಾರವು. ಚಿದ್ವಸ್ತುವಿನ ಮಹಿಮೆ ಗೊತ್ತಾದವನಿಗೆ ನಾನು ನೀನೆಂಬ ಭ್ರಾಂತಿಯು ಮುಲದ ಕೊಂಬಿಗೆ ಸಮಾನವಾಗುವದು. ಅಯೋಗ್ಯನಿಗೆ ಮಾಡಿದ ಉಪದೇಶವು ದರ್ಪಣದ ಮೇಲಿಟ್ಟ ಮುತ್ತಿನಹಾಗೆ ಆಗುವದು. ಮಧ್ಯಮನಿಗೆ ಮಾಡಿದ ಉಪದೇಶವು ತಾವರೆ ಯಲಿಯ ಮೇಲಿನ ನೀರಿನಗುಳ್ಳಿಯೆ ಮುತ್ತಿನಹಾಗೆ ಭ್ರಾಂತಿ ಹುಟ್ಟುವದು. ಉತ್ತಮನಿಗೆ ಮಾಡಿದ ಉಪದೇಶವು ಕಪ್ಪೆಚಿಪ್ಪಿನಲ್ಲಿಬಿದ್ದ ಸ್ವಾತಿ ಬಿಂದುವು ಸಹಜವಾದ ಮುತ್ತಿನಂತೆ ಕಾವಕಬ್ಬಿಣವು ನೀರುಂಡು ಶಾಂತವಾದಂತೆ ಇವನು ಶಾಂತನಾಗುವನು ಇಲಿಗಳು ರತ್ನರಾಸಿಗಳು ಇದ್ದರು ಧಾನ್ಯ ಕಣಕ್ಕೆ ಹೋಡಿದಂತೆ ಅಧಮನು ಅಲ್ಪಸುಖಕ್ಕೆ ಹೋಡುವನು ಹುಡುಗರು ತಾಯಿಮಲಿ ಹಾಲಂಬಿಟ್ಟು ಕೆಸರಾಟವಾಡಿದಂತೆ ಗುರುವಚನಾಮೃತವಂ ಬಿಟ್ಟು ಮನ್ನಮನು ಮರುಪ್ರವಾಹಕ್ಕೆ ಹೋಗುವನು. ಕಾಮಾತುರ

ದಿಂ ಸ್ತ್ರೀಯಳಂ ಪಿಡಿಯುವಂತೆ ಹಳ್ಳಕ್ಕೆ ಜಲಹೋಡುವಂತೆ ಮೇಲಕ್ಕೆಶದಕಲ್ಲು ನೆಲಕ್ಕೆಬೀಳುವಂತೆ ಉತ್ತಮನು ಸದ್ಗುರೋಪದೇಶವಂ ಪಡಿಯುವನು. ಕಲ್ಲುಗಳು ಪರಸ್ಪರವಾಗಿ ಶೇರದಿರುವಂತೆ ಅಜ್ಞಾನಿಗಳು ಎಂದಿಗು ಗುರುವಂ ಹೊಂದುವದಿಲ್ಲ. " ಗೋಕ್ಷೀರಮೇಕಂ - ಬಹುಧೇನುರೂಪಂ | ಸುವರ್ಣಮೇಕಂ ಬಹುವರ್ಣರೂಪಂ| ಮೃತ್ಪಿಂಡಮೇಕಂ-ಬಹುಭಾಂಡರೂಪಂ| ಪಿಂಡಾಂಡಮೇಕಂ - ಬ್ರಹ್ಮಾಂಡರೂಪಂ| " ಎಂಬಂತೆ ಜಲಪೂರಿತವಾದ ಕುಂಬಗಳೆಷ್ಟಿದ್ದರು ಪ್ರತಿಬಿಂಬಿಸುವ ಸೂರ್ಯನೊಬ್ಬನೆಂಬಂತೆ ೮೪ ಲಕ್ಷ ಘಟಗಳಲ್ಲಿಯು ಜೀವನೊಬ್ಬನೇ ಇರುವನು. ಚಿದ್ರವಾದ ಕನ್ನಡಿಗಳಲ್ಲಿ ಒಬ್ಬನೇ ಅನಂತವಾಗಿ ಕಾಣುವಂತೆ ಜೀವನೊಬ್ಬನೆ ಉಪಾಧಿಯಿಂದ ಅನಂತನಾಗಿಕಾಣುವನು ಬ್ರಂಹ್ಮಸೂತ್ರ ದ್ವಿತೀಯಾಧ್ಯಾಯ ತೃತೀಯಪಾದ ೧೭ನೆ ಅಧಿಕರಣ ಲಿಂಗ ಚಿನ್ಹ ಗುರ್ತು ಕಲೆ ಇವು ಒಂದು ಅರ್ಥಪ್ರಾಣ ಅಭಿಮಾನ ಇವುಒಂದು ನಕ್ಷೆ ಚಿತ್ರ ಪ್ರತಿಮೆ ಮ್ಯಾಪು ಇವುವಂದು ಗುರ್ತು ತಿಳಿಯದೆ ಗಕ್ಕೋ ಗಕ್ಕೋ ಗಕ್ಕೋ ಗಕ್ಕೋ ಎಂದು ಗುಡುಗುವಂತೆ ಕಲೆಯು ನರಿಯದೆ ಕಲಿತಶಾಸ್ತ್ರವು ವೃಥಾ ಜಪತಪಗಳಂ ಮಾಡುವದು ಗಿಳಿಯು ಮಾತನಾಡಿ ಮಲವಂ ಭುಂಜಿಸಿದಂತಾಗುವದು ಪದ್ಯ ಕಲೆಯ ನರಿಯದೆ ಕಲಿತ ಶಾಸ್ತ್ರವು ಮಲವ ತಿಂಬುವ ಮಾತಿನರಗಿಣಿ ಫಲವುಯೇನೊಂದಿಲ್ಲ. ಬೂರುಗಮರದ ತೆರನಂತೆ ಹುಟ್ಟದ ಶಿಶುವಿಗೆ ಅಳುವದು ಶಬ್ದ ಕೇಳುವದು ಈ ಎರಡು ವರ್ಣಗಳುಬಂದವು. ಶ್ರೋತ್ರಿ ಗ್ರಾಮವು ಬ್ರಾಹ್ಮಣನಿಗೆ ಜಹಗೀರಿ ಸ್ವಂತ ಗ್ರಾಮವಾಗಿರುವದು.

ಬ್ರಾಹ್ಮಣೋಮುಖಮಾಶೀತಿಯೆಂದು ವಾಕ್ಕೆಂಬ ಬ್ರಾಹ್ಮಣನು ಶ್ರೋತ್ರವೆಂಬ ಕ್ಷೇತ್ರದಿಂದ ಜೀವನೋಪಾಯವನ್ನು ಮಾಡು ವನು ಶ್ರೋತ್ರವೆಂಬ ಕ್ಷೇತ್ರವೇ ಇಲ್ಲದಹೋದರೆ ವಾಕ್ಕೆಂಬ ಬ್ರಾಹ್ಮಣನೆ ಇರುತ್ತಿರಲಿಲ್ಲ. "ಬ್ರಹ್ಮವಿದ್ ಬ್ರಾಹ್ಮಣೋಭ ವೇತ್" ಹಾಡುವನಿಗೆ ತಂದೆ ತಾಯಿಗಳು ಯಾವಂದರೇ ಶೃತಿ ಗತಿಗಳು ನುಡಿಯುವನಿಗೆ ತಂದೆ ತಾಯಿಗಳು ಯಾರಂದರೇ ಸತ್ಯವೆ ತಾಯಿ ಶಾಂತವೆ ತಂದಿ ನಡಿಯುವನಿಗೆ ತಂದಿ ತಾಯಿ ಗಳು ಯಾರಂದರೇ ದೇಶ, ಕಾಲ.

ಅಜ್ಞಾನಿಗೆ ಸನ್ಮಾರ್ಗಸಿದ್ಧವಾದ ತಪೋವಿದ್ಯಾದಿಗಳಿಂ ಪ್ರಪಂಚವಾಸನೆ ಹಿಮ್ಮೆಟ್ಟದಿರಲು. ಅವನು ಉಪದೇಶಕ್ಕೆ ಯೋಗ್ಯನಾಗುವದಿಲ್ಲ. ಒಂದುವೇಳೆ ಉಪದೇಶವಾದರೂ ಶವ ವು ನಡಿಯದಿರುವಂತೆ ಆವನು ಅಖಂಡವಾದ ಬ್ರಹ್ಮದಲ್ಲಿ ಭೇವ ರೂಪದಿಂ ಅನುಭವಸಿದ್ಧವಾದ ಈಪ್ರಪಂಚವಂಅಣಗಿಸಲಾರನು



[ ಈ ೧೫ ಶುಕ್ಲಪಕ್ಷ. ]

| | | | | | | | |
|---|---|---|---|---|---|---|---|
| ೧ | ಓಂ ೧ ಆತ್ಮ | ಓಂ ನ ಜ್ಞಾನ ೧ | ಓಂ ಮ ಹೃದಯ ೬ | ಓಂ ಶಿ ತೃಪ್ತಿ ೭ | ಓಂ ವ ಮನನ ೧೨ | ಓಂ ಯ ಆನಂದ ೧೩ | ಅಜಡ ತಾನೆ ಸಾಕ್ಷಿ ರೂಪು. |
| ೨ | ಯ ೨ ಆಕಾಶ | ಯನ ೨ ಅಹಂಕಾರ | ಯಮ ಚಿತ್ತ ೫ | ಯ ಶಿ ಬುದ್ಧಿ ೮ | ಯ ವ ಮನ ೧೧ | ಯ ಯ ಭಾವ ೧೪ | ಕರಣಪಂಚಕ ದ್ವೈತಾ ದ್ವೈತವನ್ನನುಸರಿಸಿ ಸುಖದುಃಖವನ್ನನುಭವಿಸುವನು. |
| ೩ | ವ ೩ ವಾಯು | ವನ ೩ ಪ್ರಾಣ | ವ ಮ ೪ ಅಪಾನ | ವಶಿ ೯ ಉದಾನ | ವ ವ ಸಮಾನ ೧೦ | ವ ಯ ವ್ಯಾನ ೧೫ | ಪ್ರಾಣಪಂಚಕ ಶಿವಾದ್ವೈತ ೨ ಅಳಿದು ಸಿಂದ ನಿಜಾನಂದ |
| ೪ | ಶಿ ೪ ಅಗ್ನಿ | ಶಿನ ೭ ಘ್ರಾಣ | ಶಿ ಮ ಜಿಂಹೆ ೧೨ | ಶಿ ಶಿ ಚಕ್ಷು ೧೩ | ಶಿ ವ ತ್ವಕ್ಕು ೧೮ | ಶಿ ಯ ಶ್ರೋತ್ರ ೧೯ | ಧರ್ಮಪಂಚಕ ೨ ವಂದೆನ್ನುವದು. |
| ೫ | ಮ ೫ ಅಪ್ಪು | ಮನ ಗಂಧ ೮ | ಮ ಮ ರಸ ೧೧ | ಮ ಶಿ ರೂಪು ೧೪ | ಮ ವ ಸ್ಪರ್ಶ ೧೭ | ಮ ಯ ಶಬ್ದ ೨೦ | ವಿಷಯಪಂಚಕ ದ್ವೈತಾ ದ್ವೈತವ ಕಲ್ಪಿಸಿ ಕೊಳ್ಳುವದು. |
| ೬ | ನ ೬ ಪೃಥ್ವಿ | ನ ನ ಗುಧ ೯ | ನ ಮ ಗುಹ್ಯ ೧೦ | ನ ಶಿ ಪಾದ ೧೫ | ನವ ಪಾಣಿ ೬೧ | ನ ಯ ವಾಕ್ಕು ೨೧ | ಕರ್ಮಪಂಚಕ ದ್ವೈತ. |

[ ಈ೧೫ ಕೃಷ್ಣಪಕ್ಷ. ]

ಈ ಇಪ್ಪತ್ತೊಂದರಲ್ಲಿ ಲಕ್ಷ್ಯ ಮನುಷ್ಯಜಾತಿ ಮೃಗಜಾತಿ ಪಕ್ಷಿಜಾತಿ ವೃಕ್ಷಜಾತಿ ಅಂತು ೪೪ ಲಕ್ಷ್ಯ ಜೀವರಾಶಿಗಳು ೧, ೯, ೧೩, ೨೧ ಈ ನಾಲ್ಕು ಮೂಲೆಗಳಲ್ಲಿರುವ ವಸ್ತುಸಿದ್ಧಿಗಳಂ ಕಂಡವನು ಪರಮಾತ್ಮ ಚಿನ್ಮಯನು ಲಕ್ಷ್ಯಾಲಕ್ಷಕ್ಕು ತಾನೆ ಸಾಕ್ಷಿಯಾಗಿರುವನು. ಈ ನಾಲ್ಕು ಸಿದ್ಧಿಗಳಪ್ಪೈಕಿ ಒಂದು ಸಿದ್ಧಿಸಿಕೊಂಡರೆ ಇನ್ನು ತಾನೆ ವಶವಾಗುವವು. ನಾಲ್ಕು ಕ್ಷ್ಷಾಕ ಮೂಲೆಯಲ್ಲಿರುವ ಸಂಖೆ ೧, ೯, ೧೩, ೨೧ ಅಂತು ಅಂಗಸ್ಥಲ (೪೪) ಇದನ್ನು ಕೂಡಿದರೆ ೮ ಅಂಗವಾಗುವದು. ಯಾವೆಂದರೆ ಪೃಥ್ವಿ ಅಪ್ಪು ತೇಜ ವಾಯು ಆಕಾಶ ಸೂರ್ಯ ಚಂದ್ರ ಅಗ್ನಿ ಈ ೮ ಅಂಗಗಳಿಂ ಕೂಡಿದ ದೇಹವು ನಾಲ್ಕುನಿಸೂರು ಮೂಲೆಯಲ್ಲಿರುವ ಸಂಖೆ ೯, ೧೧, ೧೩, ೧೦, ೧೪ ಅಂತು ಲಿಂಗಸ್ಥಲ (೫೭) ಇದನ್ನು ಕೂಡಿದರೆ (೧೨) ಇದನ್ನು ಅಂತು ಮಾಡಿದರೆ ೩ ಲಿಂಗಗಳಾಗುವವು ಯಾವಂದರೆ ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗ (೪೪) (೫೭) { ೪೪ / ೫೭ / ೧೦೧ } ೧೦೧ ಮೊದಲಿಗು ವಂದೆ ಅಂತ್ಯಕ್ಕು ವಂದೆ ೮ ಅಂಗ ೩ ಲಿಂಗ ಅಂತು ಮಾಡಿದರೆ ೧೧ ಎರಡು ವಂದೇ ಯಾಗಿರುವದು. ತಿಳಿದುಪ್ಪ ಹೆತ್ತುಪ್ಪಾದಂತೆ ನೀರುಮುತ್ತಾದಂತೆ ಮುಘ್ಯ ಬಿಂದುವೆ ತೋರಿ ಅಡಗುವ ಇಂದ್ರಿಜಾಲ



ಬ್ರಹ್ಮಸೂತ್ರ ದ್ವಿದ್ವಿ ೨ನೆ ಅಧಿಕರಣ ಪರಮಾಣುಗಳ ಸಮುದಾಯವೆ ವಿರಾಡ್ರೂಪ ಪುರುಷಪ್ರಮಾಣ ಪರಮಾಣ ಪುರುಷ ಈತನ ಅಡ್ಡರೇಖೆಯು ಕಲ್ಪಿತದಿಂದ ಅಂಗಗಳಾದವು, ರೇಖೆ ದೇಹ ಗ್ರೋಡಿ ಪರದಿ ಅಜ್ಞಾನ ಕಣ್ಣು ಪರೆ ಮರವಿ ಲಿಂಗದ ಸ್ವಲೀಲೆಯಿಂದ ಅನಂತ ಅಂಗವಾಗಿ ಅನಾದಿಯಲ್ಲಿ ಮಂಡಾ. ದಲಿಂಗವೆ ಮಧ್ಯ ಅನಂತವಾಗಿ ಇದರೊಳಗೆ ನಾನು ಯಾರೆಂಬ ಸಂಶಯವೆ ಅಡ್ಡರೇಖೆಯಾಗಿ ಅಂಗವಾಯಿತು ಸಂಶಯವೆಂಬ ಅಡ್ಡರೇಖೆಯು ಕಲ್ಪಿತದಿಂದಾಯಿತಲ್ಲದೆ ನಿಜವಾದ್ದಲ್ಲ. ಮಂಧಾ

ದಲಿಂಗದಲ್ಲಿ ಯರಡಾಗಿ ಕಾಣಿಸುವದು. ಹ್ಯಾಗಂದರೆ ಚಿನ್ನದಲ್ಲಿ ಬಣ್ಣಬೆರತಂತೆ ಬೆಲ್ಲದಲ್ಲಿ ಶೀ ಇದ್ದಂತೆ ಪುಷ್ಪದಲ್ಲಿ ಗಂಧವಿದ್ದಂತೆ ಆತ್ಮನಲ್ಲಿ ಆಕಾಶವಿದ್ದಂತೆ ಆಕಾಶದಲ್ಲಿವಾಯುವಿದ್ದಂತೆ ವಾಯು ವಿನಲ್ಲಿ ಅಗ್ನಿಇದ್ದಂತೆ ಅಗ್ನಿಯಲ್ಲಿ ಅಪ್ಪುವಿದ್ದಂತೆ ಅಪ್ಪುವಿನಲ್ಲಿ ಪೃಥ್ವಿಯಿದ್ದಂತೆ ಪೃಥ್ವಿಯಲ್ಲಿ ಸಚರಾಚರ ವಿದ್ದಂತೆ ಕಾಣಿಸು ವದು. ಇವುಗಳಂ ಕಳೆದುಳಿದು ವಂದೆ ಮಹಲಿಂಗವಾಗಿರುವದು.

ಈ ಮಹಲಿಂಗವೆ ಇಷ್ಟಲಿಂಗವಾಗಿರುವದು, ಪ್ರಾಣಲಿಂಗ ವಾಗಿರುವದು, ಭಾವಲಿಂಗವಾಗಿರುವದು.

ಹ್ಯಾಗಂದರೇ:—ಒಬ್ಬ ಮನುಷ್ಯನು ಸ್ನೇಹಿತನಿಗೆ ತನ್ನಮ ಗನನ್ನು ನಿನ್ನ ಮಗನೆಂತ ಹೇಳಿ ದೂರದೇಶಕ್ಕೆ ಆಗಲಿ ಅಥವ ಪ್ರಾಣವಿಯೋಗ ಕಾಲದಲ್ಲೆ ಆಗಲಿ ತನ್ನ ಮಗನಿಗೆ ಈತನೆ ನಿ ನ್ನ ತಂದೆ ಯಂದು ಭಾವಿಸಿಕೊಂಡು ನನ್ನಲ್ಲಿ ಇದ್ದ ಕೃತಜ್ಞತೆ ಯನ್ನೆ ಈತನಲ್ಲಿ ಇಟ್ಟುಕೊಂಡು ಹೋಗಬೇಕು. ಹಾಗಾದರೆ ನಿನಗೆ ಸುಖವಾಗುತ್ತೆಂದು ಸ್ನೇಹಿತನಿಗೂ ತನ್ನ ಮಗನಿಗು ಐ ಕ್ಯತೆಯಂ ಮಾಡಿ ಹೋಗುವನು. ಇದರಂತೆ ಸದ್ಗುರುವು ಶಿಷ್ಯ ನ ಶಿಖಾಚಕ್ರದಲ್ಲಿರುವ ಭಾವಲಿಂಗವನ್ನು ಇಷ್ಟಲಿಂಗವನ್ನಾಗಿ ಕೈಯಲ್ಲಿಕೊಟ್ಟು ನಾನು ದೇಶದಲ್ಲೆಲ್ಲ ಶಿಷ್ಯರನ್ನು ಪವಿತ್ರರನ್ನಾ ಗಿ ಮಾಡುವದಕ್ಕೆ ಹೋಗುವೆನಾದ್ದರಿಂದ ನಾನೆಈಲಿಂಗವೆಂದು ಪೂಜ್ಯಭಾವದಿಂದ ಕೃತಜ್ಞನಾಗಿದ್ದರೆ ನಿನಗೆ ಬೇಕಾದ ಇಷ್ಟಾ ರ್ಥವು ಸಿದ್ಧಿಯಾಗುವದೆಂದು ಅಂದರೆ ನಿನ್ನಭಾವಾನುಸಾರವಾ ಗಿ ಇಷ್ಟಾರ್ಥವಂ ಹೊಂದಿ ಸುಖಮಯನಾಗುವಿಯಂದು ಪ್ರಾ ಣಕ್ಕೆ ಉಪದೇಶಿಶಿ ಶಿಷ್ಯನಿಗೆ ಗುರುವು ತೋರಿಸಿಕೊಟ್ಟು ಅಂದ್ದರೆ

ನಿನ್ನ ಪ್ರಾಣಲಿಂಗವು ನಿನ್ನ ಕೈಯೊಳಗೆ ಯಾವಾಗ್ಯು ಇರಲಿ ಅ ನ್ಯರ ಕೈಗೆ ಕೊಡಬಾರದು, ತೋರಿಸಬಾರದು ಯೆಂದು ಹೇಳಿ ಹೋದನಂತರ ಆ ಶಿಷ್ಯನು ತನ್ನ ಪ್ರಾಣಲಿಂಗವನ್ನು ಕೈಯೊಳಗಿ ಟ್ಟುಕೊಂಡು ಪೂಜಿಸುತ್ತಾನೆ. ಹ್ಯಾಗಂದರೇ:— ಪದ್ಯ|| ಯ ನಗೆ ನೀ ನನ್ಯನೆ - ನಿನಗೆ ನಾ ನನ್ಯನೆ - ಯನಗೆ ನಿನಗೆ ಯೆಕತೆ ಯುಂಟು | ನಿನಗೆ ನಾ ಕಾಯಾವು - ಯನಗೆ ನೀ ಜೀವವು - ಯನುತೆನ್ನ ಗುರುಪೇಳಿದ ಬೋಧೆ || ನಿನ್ನನು ಯನ್ನ ಕೈಯೊ ಳು ಕೊಟ್ಟಿ ಗುರುದೇವ - ಯನ್ನನು ನಿನ್ನ ಕೈಯೊಳುಕೊಟ್ಟ ನಿ ನ್ನ ನನ್ನನೇಕವಮಾಡಿದ ಮತ್ತಿನ್ಯಾರುಂಟೆ ಲಿಂಗವುಪುಸಿ|| ಹೀಗೆ ಹೇಳಿಕೊಂಡು ತನ್ನ ಭಾವಾನುಸಾರವಾಗಿ ಇಷ್ಟಾರ್ಥವಂ ಹೊಂ ದುವನು. ವಳಗು ಲಿಂಗಮಯವೆ ಹೊರಗು ಲಿಂಗಮಯವೆ ಆಯಿತು. ಅಂದಮೇಲೆ ಕ್ಯಯಲ್ಲೆ ಇಟ್ಟುಕೊಳ್ಳುವ ದ್ಯಾಕೆ ಅಂ ದರೆ ಅನ್ನವು ಹೊರಗೆ ಇರುವದು. ಪ್ರಾಣವು ವಳಗೆ ಇರುವದು ಅನ್ನಮಯ ಪ್ರಾಣವೇ ಆಗಿರುವದು. ಆದಾಗ್ಯು ಅನ್ನವನ್ನ ಕೈ ಯಿಂದ ತೆಗದುಕೊಂಡು ಬಾಯಲ್ಲಿಇಟ್ಟುಕೊಂಡು ಹೃದಯದಲ್ಲಿ ಶೇರಿಸಿಕೊಂಡು ತೃಪ್ತಿಹೊಂದುವದು.ಆದರದರ ಧರ್ಮವಾಗಿರು ತ್ತೆ ಅದರದರ ಧರ್ಮವೆನಿಂತಲ್ಲಿ ವ್ಯವಹಾರವೆ ನಿಂತುಹೋಗು ವದು ಆದ್ದರಿಂದ ಕೈಯ್ಯಲ್ಲಿ ಇಷ್ಟಲಿಂಗವನ್ನು ಇಟ್ಟುಕೊಳ್ಳ ಬೇ ಕಾಯಿತು.

| | | | | |
|---|---|---|---|---|
| ಹೊರಗೆ | × | ಸಾಕ್ಷಿ | × | ವಳಗೆ |
| ಶಬ್ದ | × | ಯರಡಳಿದು | × | ಆನಂದ |
| ಸ್ಪರ್ಶ | × | ನಿಂದನಿಜ | × | ತೃಪ್ತಿ |

| | | | | |
|---|---|---|---|---|
| ರೂಪು | × | ಪಾದಾನಂದ | × | ಅಪರೂಪು |
| ರಸ | × | | × | ರುಚಿ |
| ಪುಷ್ಪ | × | | × | ಗಂಧ |

| | | |
|---|---|---|
| ಗುರು | ಲಿಂಗ | ಜಂಗಮ |
| ಇಷ್ಟ | ಪ್ರಾಣ | ಭಾವ |
| ವಾಕ್ಕು | ರಸನ | ಶಬ್ದ |
| ಅಕ್ಷರ | ವಾಚ್ಯ | ವಾಚಕ |

ಅರುವೆ ಆಧಾರ ಕೂಡಿಪಂದಾಗಿರುವದೇ ಸ್ವಾಧಿಷ್ಠಾನ, ಮಣಿಯ ಬೆಳಗಿನಲ್ಲಿಪ್ಪುದೆ ಮಣಿಪೂರಕ, ಆಶಇಲ್ಲದುದೆ ಅನಾಹತ, ಅಲ್ಲಹುದೆಂಬುದನತಿಗಳೆದಿಪ್ಪುದೆ ವಿಶುದ್ಧಿ, ಸರ್ವಜೀವಂಗಳಲ್ಲಿ ದಯಯುಳ್ಳುದೆ ಆಗ್ನೇಯ, ಇದೆಶಿವಯೋಗ. ಪಾದವೆ ಪವಿತ್ರವಾದರೆ ತೊಳಿಯುವದ್ಯಾಕೆ? ಗುಫವೆ ನಿಧಿಯಾದರೆ ತೊಳಿಯುವದ್ಯಾಕೆ! ಗುಹ್ಯವೇ ಗುಹೇಶ್ವರನಾದರೆ ತೋಳಿಯುವದ್ಯಾಕೆ? ಪಾಣಿಯೆ ಲಿಂಗಪೀಠವಾದರೆ ತೋಳಿಯುವದ್ಯಾಕೆ? ವಾಕ್ ವಾಗೀಶ್ವರಿಯಾದರೆ ತೊಳಿಯುವದ್ಯಾಕೆ? ಕರಣಗಳೆ ಆತ್ಮಕಿರಣಗಳಾದರೆ ತೊಳಿಯುವದ್ಯಾಕೆ?

(ನ) ಪ್ರತಿಬಿಂಬಗಳಂತೆ ಯಲ್ಲಾ ಘಟಗಳೊಂದೆಂಬುವದೆ ಭಕ್ತಿಸ್ಥಲ.

(ಮ) ಸುಖದುಃಖಗಳಂತೆ ಯಲ್ಲಾ ಜೀವಿಗಳೊಂದೆಂಬುವದೇ ಮಹೇಶ್ವರ ಸ್ಥಲ.

(ಶಿ) ನಿರ್ಭಿತನಂತೆ ವಿಷವಮೃತ ಸ್ವೀಕರಿಸುವದೇ ಪ್ರಸಾದ ಸ್ಥಲ.

(ವಾ) ಘಾಳಿಗೆ ಪರ್ವತದಂತೆ ಅಚಲತ್ವದಿಂದಿರುವದೆ ಪ್ರಾ

ಣಲಿಂಗಿಸ್ಥಲ.

(೨೫) ಸೂಜಿ ಅಯಸ್ಕಾಂತದಂತೆ ಸ್ನೇಹವಂ ಮಾಡುವದೇ ಶರಣಸ್ಥಲ.

(೩೦) ಕ್ಷೀರಕ್ಷೀರ ವೆರಸಿದಂತೆ ಸರ್ವವ್ಯಾಪಕವಾಗಿರುವದೆ ಐಕ್ಯಸ್ಥಲ.

ಈ ಕೆಳಗಿರುವವುಗಳಷ್ಟೆಕಿ ಮೊದಲ್ಯಾವುದು. ಜ್ಞಾನಿಗಳು ತಿಳಿದು ಹೇಳಿರಿ.

೧ ವಾಸನಾತ್ರಯು ಅಳಿದುದೆ ಮೊದಲೊ? ನನ್ನದೆಂಬಭಿಮಾನ ಹೋದುದೆ ಮೊದಲೊ ?

೨ ನನ್ನದೆಂಬಭಿಮಾನ ಹೋದುದೆ ಮೊದಲೊ? ಸರ್ವಜೀವಿಗಳಂ ಸಮನಾಗಿ ಕಾಣುವದೆ ಮೊದಲೊ?

೩ ಸರ್ವಜೀವಿಗಳಂ ಸಮನಾಗಿ ಕಾಣುವದೆ ಮೊದಲೊ ವಿಷವಮೃತ ಶತೃಮಿತ್ರತ್ವಗಳ ಯಣಿಕೆ ಇಲ್ಲದುದೆ ಮೊದಲೊ ?

೪ ಶತ್ರುಮಿತ್ರತ್ವಗಳ ಯಣಿಕೆ ಇಲ್ಲದುದೆ ಮೊದಲೊ ? ನಿಸ್ಸಂಕಲ್ಪವೇ ಮೊದಲೊ?

೫ ನಿಸ್ಸಂಕಲ್ಪವೆಮೊದಲೊ? ಬಯಕೆ ಇಲ್ಲದುದೆಮೊದಲೊ?

೬ ಬಯಕೆಇಲ್ಲದುದೆ ಮೊದಲೊ? ಸಮಾಧಿಯೆ ಮೊದಲೊ?

೧ ತೃಪ್ತಿಯೆ ಮೊದಲೊ? ಆನಂದವೆ ಮೊದಲೊ?

೨ ಆನಂದವೆ ಮೊದಲೊ? ನಿಸ್ಸಂಶಯುವೆ ಮೊದಲೊ?

೩ ನಿಸ್ಸಂಶಯುವೆ ಮೊದಲೊ? ನಂಬಿಕೆ ಮೊದಲೊ?

೪ ನಂಬಿಕೆ ಮೊದಲೊ? ನಿಶ್ಚಯುವೆ ಮೊದಲೊ?

೫ ನಿಶ್ಚಯುವೆ ಮೊದಲೊ? ಗುರ್ತ್ತಿಸುವದೆ ಮೊದಲೊ?

೬ ಗುರ್ತ್ತಿಸುವದು ಮೊದಲೊ ಇಚ್ಛೆಯೆ ಮೊದಲೊ?

ಲೌಕೀಕ ಜನಗಳು ಬಿಟ್ಟಿ ಜನಗಳು ವಂದೆ ಇವರಿಗೆ ಫಲವೆ ಇಲ್ಲ. ವೈದಿಕ ಜನಗಳು ಕೈಕೂಲಿ ಜನಗಳು ವಂದೆ. ಇವರಿಗೆ ಅಲ್ಪಫಲ ಯೋಗ ತಪಸ್ಸು ಔಪಾಸಕ ಜನಗಳು ಹೆಚ್ಚುಕೂಲಿ ಜನಗಳು ವಂದೆ. ಇವರಿಗೆ ಹೆಚ್ಚುಫಲ ಅಪರೋಕ್ಷ ಬ್ರಹ್ಮಜ್ಞಾನಿಗಳು ಮನೋರಾಜ್ಯವಂ ಜೈಸಿದ ರಾಜನು ವಂದೆ ಇವರಿಗೆ ಇಚ್ಛಾಫಲ.

೧ ನಾನೆಂಬ ಅಹಂಕಾರವಳಿದು ಯಲ್ಲಾಘಟಗಳು ವಂದೆಂಬುವದೆ ಭಕ್ತಿಸ್ಥಲ ಇದಕ್ಕೆ ಶಾಂತವೇ ಗುರ್ತು.

೨ ನಾನೆಚ್ಚು ತಾನೆಚ್ಚೆಂಬ ಚಿತ್ತ ಗುಣಕೆಡಿಸಿ ಯಲ್ಲಾ ಜೀವಿಗಳು ವಂದೆ ಯಂಬುವದೆ ಮಹೇಶ್ವರಸ್ಥಲ ಇದಕ್ಕೆ ಮೌನವೆ ಗುರ್ತು.

೩ ಮೌನಕ್ಕೆನುಗುರ್ತು ಶತ್ರು ಮಿತ್ರುತ್ವ ವಿಷಾಮೃತ ಸುಖ ದುಃಖ ಸಮಾನವೆ ಗುರ್ತು ಇದಕ್ಕೆನುಗುರ್ತು.

೪ ನಿರ್ಭೀತಿಯೆಗುರ್ತು ಇದಕ್ಕೆನುಗುರ್ತು.

೫ ಸ್ನೇಹಮಾಡುವದೆ ಗುರ್ತು ಇದಕ್ಕೆನುಗುರ್ತು.

೬ ಏಕತ್ವವೇ ಗುರ್ತು ಇದಕ್ಕೆನುಗುರ್ತು ಸಮಾಧಿಯೇ

೧ ಗುರುಕಟಾಕ್ಷವಾಗಿದೆಯಂತೆ, ಪುಟುಸ್ಥಲ ಜ್ಞಾನ ಇಲ್ಲವಂತೆ. ೨ ಸಮಾಧಿಯಂತೆ, ಬಯಕೆ ಬಿಡದಂತೆ. ೩ ಬಯಕೆ ಇಲ್ಲವಂತೆ, ಕಲ್ಪನೆ ಹೋಗದಂತೆ. ೪ ಕಲ್ಪನೆ ಇಲ್ಲವಂತೆ, ಅನುಮಾನಹೋಗದಂತೆ. ೫ ಅನುಮಾನ ಇಲ್ಲವಂತೆ, ದುಃಖದ ಭಯವಂತೆ. ೬ ದುಃಖವಭಯು ಇಲ್ಲವಂತೆ, ಶತ್ರುವಿಷಕ್ಕೆ ಭೀತ

ನಂತೆ. ೭ ಶತೃವಿನಭಯೆ ಇಲ್ಲವಂತೆ, ಸರ್ವಸಮನಾಗಿ ಕಾಣ ನಂತೆ. ೮ ಸರ್ವಸಮನಂತೆ, ನನ್ನದೆಂಬಭಿಮಾನ ಹೋಗದಂತೆ. ೯ ನನ್ನದೆಂಬಭಿಮಾನ ಇಲ್ಲವಂತೆ, ಯೇನಾದರು ತೆಗದುಕೊಂಡ ರೆ ಸುಮ್ಮನಿರನಂತೆ. ೧೦ ಮೌನಿಯಂತೆ, ವಾಚಾಳಕತ್ವ ಬಿಡ ನಂತೆ, ಅನುಮಾನ ಇಲ್ಲವಂತೆ ಭೀತನಂತೆ. ೧೧ ಉದಯ ಮಾ ಧ್ಯಾಹ್ನ ಸಾಯಂಕಾಲವೆ ಇಲ್ಲವಂತೆ, ತ್ರಿಕಾಲ ಜ್ಞಾನಿಯಂತೆ. ೧೨ ಕಾಮವನ್ನಳಿದಿರುವನಂತೆ, ಅತ್ಯಾಶೆಯಂತೆ. ೧೩ ತಾನೆ ಬ್ರ ಹ್ಮಯನಂತೆ, ಮೋಕ್ಷಲಕ್ಷ್ಮಿಯಂಕಾಣದೆ ಬಿಕ್ಷಬೇಡುವನಂತೆ. ೧೪ ಉಪದೇಶವಾಗಿರುವದಂತೆ, ತಾನೊಬ್ಬರಿಗೂ ಶಿಷ್ಯನಲ್ಲಂತೆ. ೧೫ ಶಿವನೆತಾನಂತೆ, ಜೀವದಗುಣ ಹೋಗಿಲ್ಲವಂತೆ. ೧೬ ಜೀವ ಗುಣ ಇಲ್ಲವಂತೆ, ಶಿವನಾಗಬೇಕರತೆ. ೧೭ ಶಿವನಾಗಿರುವನಂತೆ, ದ್ವೈತವಂತೆ, ದ್ವೈತಇಲ್ಲವಂತೆ ಕೂಡೂವ ಬಯಕೆಇದೆಯಂತೆ. ೧೮ ಗುರ್ತಿಸಿರುವನಂತೆ, ಆತ್ಮನನ್ನು ಕಾಣನಂತೆ. ೧೯ ಗುರ್ತೆ ಇಲ್ಲವಂತೆ, ನಿಶ್ಚೈಸಿರುವನಂತೆ. ೨೦ ನಿಶ್ಚಯವೇ ಇಲ್ಲವಂತೆ, ನಂಬಿಕೆ ಇದೆಯಂತೆ. ೨೧ ನಂಬಿಕೆ ಇಲ್ಲವಂತೆ, ನಿಸ್ಸಂಶಯನಂತೆ. ೨೨ ಸಂಶಯನಂತೆ, ಸದಾನಂದನಂತೆ. ೨೩ ಆನಂದವೇ ಇಲ್ಲ ವಂತೆ, ನಿತ್ಯತೃಪ್ತನಂತೆ.

೧ ಘಟವು ರೋಗದಿಂದ ಸಾಧುವಾಗಿದ್ದರೆ ಕೆಟ್ಟಮನ ವೇನುಮಾಡುವದು? ೨ ಕೆಟ್ಟಮನವಿದ್ದರೂ ಘಟಕ್ಕೆನುಗು ರ್ತು ಚೈತನ್ಯವೆ ಚಲನವಾಗದಿದ್ದರೆ ಚಿತ್ತವೇನು ಮಾಡುವದು? ೩ ಚಿತ್ತವಿದ್ದರು ಚೈತನ್ಯವಿಲ್ಲದಿದ್ದರೆ ಪ್ರಯೋಜನವೇನು? ೪ ತಾನೆ ನಿರ್ಭೀತಿಯಿಂದಿದ್ದರೆ ಸುಖದುಃಖಗಳೇನುಮಾಡುವವು? ೫ ತಾನೆ ದೂರದಲ್ಲಿದ್ದರೆ ಶಬ್ದವೈಷಮ್ಯಗಳ ಹಂಗೇಲ್ಲಿಯದು? ೬

ತಾನೆ ಇಲ್ಲದವನಾಗಿರುವಲ್ಲಿ ರೂಪುರುಚಿಗಳೆಲ್ಲಿಯವು? ೭ ರೂಪುರುಚಿಗಳಿದ್ದರು ನಿಷ್ಕಾಮನನ್ನೇನು ಮಾಡ್ಯಾವು? ೮ ಶಬ್ದಸ್ಪರ್ಷಸ್ಯಗಳಿದ್ದರು ಕಿವುಡನನ್ನೇನುಮಾಡ್ಯಾವು? ೯ ಸುಖದುಃಖಗಳಿದ್ದರು ಶಾಂತೇಶ್ವರನನ್ನೇನು ಮಾಡ್ಯಾವು? ೧೦ ತಾನೇ ಶಾಶ್ವಿತನಾಗಿರುವಲ್ಲಿ ಜನನ ಮರಣಾದಿಗಳೆಲ್ಲಿಯವು? ೧೧ ಜನನ ಮರಣಗಳಿದ್ದರು ಸ್ಥಿರಂಜೀವಿಯನ್ನೇನು ಮಾಡ್ಯಾವು? ೧೨ ಕಿವುಡ ಮಾಡುವ ಕರ್ಮವೇನು? ಸ್ವಕರ್ಮ. ೧೩ ಪಂಡಿತನ ತಿಳುವಿಕೆ ಯಂಥಾದ್ದು? ಸರ್ವಸಮಶಾಂತಿಯು. ೧೪ ಅಂಧಕನು ಮಾಡುವ ಔಪಾಸನವೇನು? ಕರ್ಮೋಪಾಸನೆ. ೧೫ ಕೈ ಇಲ್ಲದಿದ್ದರು ಸರ್ವರನ್ನು ವಂದೆಸಲಮುಟ್ಟುವದ್ಯಾವದು? ಗಾಳಿ. ೧೬ ಯಾರಿಗೆ ಮಡಿಮೈಲಿಗೆಗಳು? ಮನಸಿನ ಸಂಶಯ ಪಿರುವಂಥಾವರಿಗೆ. ೧೭ ಕಾಲಿಲ್ಲದಿದ್ದರು ದಾರಿಮಾಡಿದಕೂಡ್ಲೆ ಬರುವದ್ಯಾವದು? ನೀರು. ಬಾಇಲ್ಲದಿದ್ದರು ಹಾಕಿದ್ದನ್ನೆಲ್ಲಾ ನುಂಗುವದ್ಯಾವದು? ಅಗ್ನಿ. ನಿಂತಲ್ಲೆ ಹುಟ್ಟಿ ಸಾಯುವದೇನು? ಘಟ. ೧೯ ಉಣ್ಣಲಿ ಉಣ್ಣದೆ ಇರಲಿ ತೃಪ್ತಿ ಇಂದಿರುವ ಹೃದಯ ಯಾವದು? ಆಕಾಶ. ಯಾವನಿಗೆ ಮೈಯಲ್ಲ ಕಣ್ಣುಗಳಿರುವವು? ಆತ್ಮಶೇಷನಿಗೆ. ೨೧ ಈ ಶೇಷನು ಶುಕ್ಲಪಕ್ಷ ಕೃಷ್ಣಪಕ್ಷ ಒಂದು ನಡಿಯುವನಾದ್ದರಿಂದ ಊಊ ಹೀಗು ಹಾಗು ಕೂಡ ನಡಿಯುವನು.

ನ್ಹಾನೇ ಪೂರ್ವದವನಾದ್ದರಿಂದ ನಕಾರವು ಪೂರ್ವದಿಕ್ಕಿನಲ್ಲಿ ಸ್ಥಾಪಿತವಾಯಿತ್ತು. ಚಿದ್ರುವಾದ ಕನ್ನಡಿಗಳಲ್ಲಿ ಚಿದ್ರುಸವಾಗಿ ನಾನೆ ಅನಂತವಾಗಿರುವದರಿಂದ ಅನಂತನೆ ನಾನಾಗಿ ನನ್ನಲ್ಲಿ ಮಮಕಾರವಿರುವದರಿಂದ ಮಕಾರವು ಪಶ್ಚಿಮದಿಕ್ಕಿನಲ್ಲಿ ಸ್ಥಾಪಿ.

ತವಾಯಿತು. ಈ ಯರಡನ್ನು ಗುತ್ರ್ತಿಸುವದು ಆಲೋಚನಿ
ಯಾದ್ದರಿಂದ ನನ್ನಲ್ಲಿರುವ ಆಲೋಚನಿಯೆ ಜ್ಞಾನಚಕ್ಷುವಾಗಿಧೆ.
ಈ ಜ್ಞಾನವು ದಕ್ಷಿಣಾಮೂರ್ತಿಯಾಗಿರುವದರಿಂದ ಶಿಕಾರವು ದ
ಕ್ಷಿಣದಿಕ್ಕಿನಲ್ಲಿ ಸ್ಥಾಪಿತವಾಯಿತು. ದಕ್ಷಿಣಾಮೂರ್ತಿಯು ಆ
ತ್ಮರಾಮ ಆ ರಾಮ ವಿಶ್ರಾಂತಿ ಮನವು ಚಲಿಸದೆ ಚಿತ್ತವಿಶ್ರಾಂ
ತಿ ಹೊಂದಿರುವದರಿಂದ ವಕಾರವು ಉತ್ತರದಿಕ್ಕಿನಲ್ಲಿ ಸ್ಥಾಪಿತ
ವಾಯಿತು. ವಿಶ್ವವು ನನ್ನ ಹೃದಯಾಕಾಶದಲ್ಲಿರುವದರಿಂದ ಯ
ಕಾರವು ಆ ಕಾಶಿಯಲ್ಲಿ ಸ್ಥಾಪಿತವಾಯಿತು. ನ, ಮ, ಯರಡು
ಅಕಾರ. ಶಿ, ವ, ಯರಡು ಉಕಾರ. ಯ, ಓಂ, ಯೆರಡು ಮಕಾ
ರ. ಅ ಉ ಮಾಕ್ಷರವೆ ಓಂಕಾರ. ಈ ಓಂಕಾರವೇ ನಿರವಯ
ವಾದ ಶೂನ್ಯನು ಸಾಕ್ಷಿರೂಪನು ಈತನ ಗುರ್ತನ್ನು ತಿಳಿಸುವ
ವರೆ ಪಂಚಾಚಾರ್ಯರು ನಾನೆ ಅನಂತನಾಗಿದ್ದೆನೆಂಬವನೆ ಪಂ
ಡಿತಾರಾಧ್ಯ. "ಅಹಿಂಸಾಪರಮೋಧರ್ಮ" ಎಂಬ ಸದ್ಧರ್ಮ
ದಿಂದಿರುವವನೆ ಮರುಳಾರಾಧ್ಯ. ನನ್ನೊಳಗೆ ಲಕ್ಷಣಗಳು ಯೇ
ನೊಂದಿಲ್ಲದೆ ಸುಲಿದಹಾಗೆಲ್ಲ ಬಾಳೆಪಟ್ಟೆಯಂತೆ ಅಜ್ಞಾನವೆಂಬ
ಜನ್ಮ ಪರಂಪರೆಯನ್ನು ಬಿಟ್ಟವನೆ ರೇವಣಾರಾಧ್ಯ. ವಾಯು
ವಂ ತಡದು ಚಿತ್ತವಿಶ್ರಾಂತಿಯಂ ಹೊಂದುವವನೆ ಯೇಕೋರಾ
ಮಾರಾಧ್ಯ ವಿಶ್ವವು ಯೇಕತ್ವವಾಗಿರುವವನೆ ವಿಶ್ವಾರಾಧ್ಯ. ಇ
ದಕ್ಕೆ ಮೌನವಾಗಿರುವ ಶೂನ್ಯವೆ ನಾನಲ್ಲ: ಮಹಾಪ್ರಭುವುಂ
ಬುವನೆ ನಿರಂಜನ ನಿರವಯ ಪ್ರಣವ ಸ್ವರೂಪಿ ವ್ಯವಹಾರದ
ಲ್ಲಿ ಈ ಆರು ಲಕ್ಷಣಗಳು ಪ್ರತ್ಯಕ್ಷಕಾಣುವವು. ಶಿವನೆ ಜಗ
ನ್ಮಯವಾಗಿರುವಲ್ಲಿ ವಿವಾದಕ್ಕೆ ಆಸ್ಪದವೆಲ್ಲಿಯದು ಅಂಗದೇಶ
ಮಹುಕ್ಕಾರವೆಂಬ ಭಾರತಖಂಡ ತೊಡಿಯೆಂಬ ಊರುಯೆಂಬ

ಪಟ್ಟಣದಲ್ಲಿ ವಿಶ್ವವು ವಾಸವಾಗಿರುವದು. ಆತ್ಮಶೇಷ ○ಶೂನ್ಯವು ನಾನಲ್ಲವೆಂಬ ಸೌಂಜ್ಞೆಯುಳ್ಳ ಮಹಪ್ರಭು ಲಿಂಗಮೂರ್ತಿಯಲ್ಲಿ ಇವುಗಳೆಲ್ಲ ಅವತರಿಸಿರುವವು. ಷಡ್ಜದಲ್ಲಿ ಋಷಭ ಗಾಂಧಾರ, ಧೈವತ, ಮಧ್ಯಮ, ಪಂಚಮದಂತೆ ನಿರವಯ ಅಂದರೆ ಕೊಂಬು ಮೇಲತ ಕೆಳಗತ ಕ್ರಮಳಿ ಓತ್ವ ಯೇನೊಂದಿಲ್ಲದ ಓಂಕಾರದಲ್ಲಿ ನಮಶಿವಯಃ ಎಂಬ ಪ್ರಣಮಗಳು ಅವತರಿಸಿರುವವು. ಇಷ್ಟಲಿಂಗಪೂಜಕರು ಅಂದರೇ ಪ್ರತಿಕ ಧ್ಯಾನಮಾಡು ಮಾಡುವರು. ತಟ್ಟಬಟ್ಟಲಲ್ಲಿ ಊಟಮಾಡುವರು. ಪ್ರಾಣಲಿಂಗ ಪೂಜಕರು ಅಂದರೆ ಅಹಂಗ್ರಹಧ್ಯಾನಮಾಡುವರು. ಕರಕಮಲದಲ್ಲಿ ಊಟಮಾಡುವರು ಭಾವಲಿಂಗಪೂಜರು ಅಂದರೆ ಪ್ರತಿಕ ಧ್ಯಾನಕ್ಕು ಅಹಂಗ್ರಹಧ್ಯಾನಕ್ಕು ಸಾಕ್ಷಿಯಾಗಿ ಭ್ರಮಣರಹಿತ ಬ್ರಾಹ್ಮಣನು ಬಟ್ಟ ಪರ್ಣದೊಳುಊಟ ಮಾಡುವನು. "ಬ್ರಹ್ಮವಿದ್ ಬ್ರಾಂಹ್ಮಣೋಭವೇತ್"

## ಅಷ್ಟದಿಕ್ಪಾಲಕರು ಇವರ ವಾಹನಗಳು.

ಗಜಾಂತೈಶ್ವರ್ಯವನ್ನು ಕಾಲಡಿಗೆ ಹಾಕಿಕೊಂಡಿರುವನು. ಧಾನ್ಯವೆಂಬ ಇಂದ್ರನು ಇವನು ಹಸ್ತದಲ್ಲಿರುವನು. ಭೋಗದಲ್ಲಿ ಇವನೇ ದೇವೇಂದ್ರನು. ಇಪ್ಪತ್ತೇಳು ಮಳೆಗಳಂ ತನ್ನಸತಿಯರನ್ನಾಗಿ ಮಾಡಿಕೊಂಡು ಆಪೈಕಿ ರೋಹಿಣಿ ಯಂಬುವಳಲ್ಲಿ ಮಾತ್ರ ಅತ್ಯಂತಪ್ರೀತಿಇಂದಿರುವನು. ಆದ್ದರಿಂದ ರೋಹಿಣಿ ಮಳಿಯಲ್ಲಿ ಬಿತ್ತಿದ ಧಾನ್ಯವು ನಷ್ಟವಾಗದೆ ಫಲಿಸುವದು. ಅಪ್ಪುಗೂಡಿದ ಸರೋವರವೆಂಬ ಅಪ್ಪುಸರಸ್ಸುಗಳಿಂಕೂಡಿಕೊಂಡಿರುವನು. ಇವನಿಗೆ ಅಪ್ಪು ಸರಸ್ತ್ರೀಯರು ಅನಂತರಿರುವರು. ಅಜ್ಞಾನವೆಂಬ ಕತ್ತಲೆಯ ಕುರಿಯನ್ನು ಕಾಲಡಿಗೆ ಹಾಕಿಕೊಂಡಿರುವನು. ಜ್ಞಾನಾಗ್ನಿಯು ಭ್ರೂಮಧ್ಯಸ್ಥಾನ ಅಂದರೆ ದೇಹ

ಜೀವದ ಮಧ್ಯಇರುವನು. ತ್ರಿಕೋಣಾಕೃತಿ ಮೂರುಕಾಲುಳ್ಳ ವನು ಉದಯ ಮಧ್ಯಾಹ್ನ ಸಾಯಂಕಾಲ ವ್ಯವಹಾರಿಕ ಪರ ಮಾರ್ಥಿಕ ವೆಂಬ ಎರಡು ಮುಖವುಳ್ಳವನು. ತ್ರಿಕಾಲಜ್ಞಾನಿ ತಮೋಗುಣ ವೆಂಬ ಕೋಣತನುವಂ ಕಾಲಡಿಗೆ ಹಾಕಿಕೊಂಡಿ ರುವನು. ಸತ್ವಗುಣವೆಂಬ ಯಮನು ಉರಸ್ಥಾನದಲ್ಲಿರುವನು. ನಡದುಹೋಗಿ ಪರಮಾತ್ಮನಂ ಕಾಣಬೇಕೆಂಬ ಕಲ್ಪಿತ ಪುರುಷ ನಂ ಕಾಲಡಿಗೆ ಹಾಕಿಕೊಂಡಿರುವನು. ಇದ್ದಲ್ಲೆ ನೋಡುವ ಅ ಕಲ್ಪಿತ ಪುರುಷನೆಂಬ ನೈರುತ್ಯನು ಇವನಿಗೆ ಕಾಲುಇಲ್ಲ. ಅಂದ ರೇ ಇವನಿಗೆ ಕಾಲವಿಲ್ಲ. ಜೀವಜಂತುಗಳೆಂಬ ಸಂಶಯವಂತಿಸ್ನ ವ ನೆಗಳನಂ ಕಾಲಡಿಗೆ ಹಾಕಿಕೊಂಡಿರುವನು. ಸರ್ವವು ಶಿವ ಮಯವಾಗಿರುವನು. ವಾಕ್ಪತಿಯಂಬ ವರುಣನು ಪ್ರಜ್ಞಾನಂ ಬ್ರಂಹ ವಾಕ್‌ಸ್ಥಾನದಲ್ಲಿರುವನು. ಕ್ಷಣಕ್ಕೊಮ್ಮೆ ಚಿಗುರುವ ಮನವೆಂಬ ಚಿಗುರಿಯಂ ಕಾಲಡಿಗೆ ಹಾಕಿಕೊಂಡಿರುವನು. ಚಿ ತ್ತ ವಿಶ್ರಾಂತನೆಂಬ ವಾಯುವು ಶುಭ್ರವಾದ ಕುದುರೆಯಂಬ ಶುಕ್ಲವನ್ನು ಕಾಲಡಿಗೆ ಹಾಕಿಕೊಂಡಿರುವನು. ನಿರಾಶೆಯಂಬ ಕುಬೇರನು ವಶುತನದಿಂ ಮುದಿತನವಂ ಹೊಂದಿದ ವೃಷಭನಂ ಕಾಲಡಿಗೆ ಹಾಕಿಕೊಂಡಿರುವನು. ಪಶುಪತಿಯಂಬ ಈಶಾನ್ಯನು ೧ ಚಂದ್ರ, ೨ ಅಗ್ನಿ, ೩ ಸೂರ್ಯ, ೪ ಆಕಲ್ಪಿತ ಪುರುಷ, ೫ ವಾಕ್ಪತಿ, ೬ ಚಿತ್ತವಿಶ್ರಾಂತ, ೭ ನಿರಾಶಕ ಕುಬೇರ, ೮ ಈ ಶಾನ್ಯ. ಸರ್ವವ್ಯಾಪಕ ಶೂನ್ಯ (೦) ಮಧ್ಯ ಶೂನ್ಯ ಧಾನ್ಯವು ಪೃಥ್ವಿ ಸಂಬಂಧವಾದ್ದರಿಂದ ಇಂದ್ರನಿಗೆ ಮೈಯಲ್ಲ ಯೋನಿ ಯಾಯಿತು. ಯೊನಿಯೆ ಕಣ್ಣು ಈ ಕಣ್ಣಿನಿಂದ ಉತ್ಪತ್ತಿ ಯಾ ಗುವದು. ಬೀಜದ ಕಣ್ಣಿನಿಂದ ವೃಕ್ಷೋತ್ಪತ್ತಿಯಾಗುವದು.

ದೃಗ್ದೃಶ್ಯದಂತೆ ಪೃಥ್ವಿಗೆ ಮೈಯಲ್ಲಯೋನಿ. ಅಪ್ಪುವಿಗೆ ಮೈಯಲ್ಲ ಕಾಲು. ಅಗ್ನಿಗೆ ಮೈಯೆಲ್ಲ ಬಾಯಿ. ವಾಯುವಿಗೆ ಮೈಯಲ್ಲ ಕೈ. ಆಕಾಶಕ್ಕೆ ಮೈಯಲ್ಲ ಹೊಟ್ಟೆ. ಆತ್ಮಶೇಷನಿಗೆ ಮೈಯಲ್ಲ ಕಣ್ಣು. ಒಂದನೇದು ಸಿಧಿ, ಎರಡನೇದು ಜ್ಞಾನಾವಧಿ, ಮೂರನೇದು ಕಾಲಾವಧಿ, ನಾಲ್ಕನೇದು ಓಷಧಿ, ಐದನೇದು ವಾರಿಧಿ, ಆರನೇದು ಸಮಾಧಿ. ಯೋಳನೇದು ನವನಿಧಿ, ಎಂಟನೇದು ಸನ್ನಿಧಿ. ಧಿಶಬ್ದಗಳೆಲ್ಲ ಈಶಾನ್ಯನಲ್ಲಿರುವದರಿಂದ ಸನ್ನಿಧಿ ಯಂಬ ಹೆಸರಾಯಿತು. ಜೀವಕೋಟಿಗಳೆಲ್ಲ ಇಷ್ಟಲಿಂಗ ಉಳ್ಳುವುಗಳಾಗಿರುತ್ತವೆ. ಇಷ್ಟಲಿಂಗವು ಗುರುಸ್ಮರಣೆ ಮಾಡುವದು ನಾದವೆ ಗುರು ಇಷ್ಟಲಿಂಗ ದೊಳಗೆ ಗುರುವಿರುವನು ಗುರುವಿನೊಳಗೆ ಶೂನ್ಯಲಿಂಗವಿರುವದು. ಶೂನ್ಯಲಿಂಗದೊಳಗೆ ಭಾವಲಿಂಗವಿರುವದು. ಭಾವಲಿಂಗದೊಳಗೆ ಪ್ರಾಣಲಿಂಗವಿರುವದು. ಪ್ರಾಣಲಿಂಗದೊಳಗೆ ಭಾವಲಿಂಗವಿರುವದು. ಈ ಭಾವಲಿಂಗದಲ್ಲಿ ಜನನ ಮರಣ ಬಂಧಮೋಕ್ಷಗಳು ಹುಟ್ಟಿ ಅಡಗುವವು. ಪ್ರಾಣಲಿಂಗದಲ್ಲಿ ನಾನಾವರ್ಣ ಶೀತೋಷ್ಣಗಳು ಹುಟ್ಟಿ ಅಡಗುವವು. ಇಷ್ಟಲಿಂಗದಲ್ಲ ವಿಷಮೃತ ನಾನೀನೆಂಬುವದು ಹುಟ್ಟಿ ಲಯುವಂ ಪೊಂದುವವು. ಆರು ಮೂರಲ್ಲಿ ಅಡಗಿದವು. ಮೂರುವಂದರಲ್ಲಿ ಅಡಗಿದವು. ವಂದೇ ಶ್ಯೂನ್ಯವಾಗಿರುವದು. ಶೇಷ ಈ ಆತ್ಮಶೇಷನಲ್ಲಿ (ನಾದ) ಗುರು ಹುಟ್ಟಿತು. ಅಂದರೆ ಹೇಳುವನೊಬ್ಬ ಕೇಳುವನೊಬ್ಬ ಇವರಿಬ್ಬರು ವಂದೆ ಆಗಿ ಭಾವಲಿಂಗದಲ್ಲಿ ಜನನ ನೋಡುವನೊಬ್ಬ ಕೂಡುವನೊಬ್ಬ ಇವರಿಬ್ಬರು ಒಂದಾಗಿ ಹುಟ್ಟಿದರು. ಪ್ರಾಣಲಿಂಗದಲ್ಲಿ ಆನಂದಪಡುವನೊಬ್ಬ. ತೃಪ್ತಿಪಡುವನೊಬ್ಬ ಇವರಿಬ್ಬರು ವಂದಾಗಿ

ಮುಕ್ತ್ವವರು ಇಷ್ಟಲಿಂಗದಲ್ಲಿ ತೃಪ್ತಿಹೊಂದುವವನು ಆನಂದಪಡುವ ವನು ಕೂಡುವವನು ನೋಡುವವನು ಕೇಳುವವನು ಹೇಳುವವನು ಇವರೆ ಲ್ಲರು ಮೌನ (೦) ಶೂನ್ಯ ನಿರಂಜನ ನಿರವಯುವನಲ್ಲಿಯೆ ಅಡಗಿದ ರು ನಿತ್ಯನೆ ತಾನಾದಲ್ಲಿ ಜನನ ಮರಣಗಳಿಲ್ಲ ಶಬ್ದ ಭೆದ ವಿಲ್ಲದವ ನಿಗೆ ಬಂಧಮೋಕ್ಷಗಳಿಲ್ಲ ಸ್ಪರ್ಶಭೆದವಿಲ್ಲದವನಿಗೆ ಶೀತೋಷ್ಣಗ ಳಿಲ್ಲ ರೂಪುಭೇದವಿಲ್ಲದವನಿಗೆ ನಾನಾವರ್ಣಗಳಿಲ್ಲ ಜೀವಭೇದವಿ ಲ್ಲದವನಿಗೆ ವಿಷವಮೃತಗಳಿಲ್ಲ ಘಟಭೇದವಿಲ್ಲದವನಿಗೆ ನಾನೀ ನೆಂಬುವದಿಲ್ಲ.

## ಭಕ್ತನು ನಡಿಸುವ ವಿಭಕ್ತಿ.

ನೀನು ಜಗತ್ಕರ್ತೃವು. ಪಶುಪತಿಯಂತೆ
ನಿನ್ನನ್ನು ಜಗತ್ತಾಶ್ರಯಮಾಡಿಕೊಂಡಿರುವದು ನಾನುನಿನ್ನ
ನಾಶ್ರೈಸಿದಂತೆ.
ನಿನ್ನಿಂದ ಜಗಚ್ಚೈತನ್ಯವು. ನನ್ನಚೈತನ್ಯದಂತೆ
ನಿನಗೋಸ್ಕರ ಜಗತ್ತಿನಶೇವವು. ನಾನುನಿನ್ನಪೂಜಿಸಿದಂತೆ
ನಿನ್ನದೆಶಿ ಇಂದ ಜಗತ್ಪಾಲನವು. ನನ್ನಪಾಲನೆಮಾಡಿದಂತೆ
ನಿನ್ನಕಳೆಯೆ ಜಗತ್ತು ನನ್ನಪ್ರಾಣದಂತೆ
ನಿನ್ನಲ್ಲಿ ಜಗತ್ತಿನಬಂಧನನಿವೃತ್ತಿಯು. ನನ್ನಸುಖದಂತೆ

## ಜ್ಞಾನಿಯ ವಿಭಕ್ತಿ.

ನಾನು ಜಗದಾದಿಯುಳ್ಳ ಸಚ್ಚಿದಾನಂದ ಸ್ವರೂಪನು
ನನ್ನನ್ನು ಜಗತ್ತುಕೂಡಿ ಪ್ರಕಾಶ ಉಂಟಾ ಇತು ಪರು
ಷವಂಟಿದಲೋಹದಂತೆ.
ನನ್ನಿಂದ ಜಗತ್ಕಲ್ಪಿತ ವಾಯಿತು ನವಿಲುವೊಟ್ಟೆಯ
ವರ್ಣದಂತೆ.

ನನಗೋಸ್ಕರ ಜಗತ್ಪದಾರ್ಥ ಭೋಗ್ಯವಾ ಇತು ತಾ ಇವೋಲಿಹಾಲಿನಂತೆ.

ನನ್ನದೆಶಿ ಇಂದ ಜಗನ್ನಿರ್ಮಾಣವಾ ಇತು ಕೂಲಾಲನ ಮೃತ್ತುಂಡದಂತೆ.

ನನ್ನ ಸ್ವರೂಪ ಉಳ್ಳದ್ದು ಜಗತ್ತು ಜೋತಿಸ್ವರೂಪ ಉಳ್ಳಪ್ರಕಾಶದಂತೆ.

ನನ್ನಲ್ಲಿ ಜಗತ್ತು ಲಯವಂಹೊಂದಿತು ಊರ್ಣನಾಭಿಯಂತೆ

## ಪ್ರವೃತ್ತಿ ವಿಭಕ್ತಿ.

ನಾವು ಜಗದಾದಿಯೂದ ಸಚ್ಚಿದಾನಂದ ಸ್ವರೂಪರು

ನಮ್ಮನ್ನು ಮಾಯೆಯು ಕೂಡಿಪ್ರಪಂಚವಾಇತು

ನಮ್ಮಿಂದ ಜಗತ್ಕಲ್ಪಿತವಾಇತು ನಾನಾವರ್ಣದ ಜಾತಿಗಳಂತೆ ಮತ್ತು ಸುಕೃತದುಷ್ಕೃತದಂತೆ

ನಮಗೋಸ್ಕರ ಜಗತ್ಪದಾರ್ಥಭೋಗ್ಯವಾಇತು ಪಾಪಪುಣ್ಯದಂತೆ

ನಮ್ಮದೆಶಿಇಂದ ಜಗನ್ನಿರ್ಮಾಣ ವಾಇತು ಇಹಪರಲೋಕಗಳಂತೆ

ನಮ್ಮ ಸ್ವರೂಪ ಉಳ್ಳದ್ದು ಜಗತ್ತು ವೀರ್ಯಪಿಂಡದಂತೆ

ನಮ್ಮಲ್ಲಿ ಜಗತ್ತುಲಯವಂಹೊಂದಿತು ಕೋಳಿಯರೆಕ್ಕೆಯೊಳಗಿರುವಮಕ್ಕಳಂತೆ

## ವೈರಾಗ್ಯ ವಿಭಕ್ತಿ.

ನಾನು ಜಗದಾಧಾರನು ಚಿತ್ರಗಳಿಗೆ ಗೋಡೆಯಂತೆ

ನನ್ನನ್ನು ಜಗನ್ಮಾಯೆಯು ಕೊಡಿಕೊಂಡಿರುವದು ತಿಲದೊಳಗಿನತೈಲದಂತೆ

ನನ್ನಿಂದ ಜಗತ್ತು ನಿರ್ವಿಣ್ಣಸಲ್ಪಟ್ಟಿತು ಓಪ್ಪೆಯಂತೆಗದ ಬೀಜದಂತೆ

ನನಗೋಸ್ಕರ ಜಗನ್ನಿವೃತ್ತಿಯಾಇತು ಇಂದ್ರಜಾಲದಂತೆ

ನನ್ನದೆಶಿಇಂದ ಜಗನ್ಮಿತ್ಯ ಬ್ರಹ್ಮಸತ್ಯನಾಇತು ವಾಚ್ಯ ವಾಚಕದಂತೆ

ನನ್ನಛಾಯಾಸಂಬಂಧಜಗ ಪ್ರತಿಬಿಂಬದಂತೆ

ನನ್ನಲ್ಲಿ ನಾನಲ್ಲ ಮೌನಿಯಂತೆ

ಪ್ರ - ಚ - ಪ್ರ - 9 - 10 - ನೆ ಅಧಿಕರಣ

ಈಜ್ಞಾನಿಗೆ ಪ್ರಾರಬ್ಧ ಕರ್ಮವು ಬಾಧಿಸಲಾರದು.

**ಜಂಗಮ ವಿಭಕ್ತಿ.**

೧, ನಾನು ಜಗತ್ಪೂಜ್ಯನು

೨, ನನ್ನನ್ನು ಜಡಶೇರಿ ಅಜಡವಾಇತು

೩, ನನ್ನಿಂದಜಗತ್ಕಲ್ಪಿತವಾಇತು ರಜ್ಜು ಸರ್ಪನ್ಯಾಯದಂತೆ

೪, ನನಗೋಸ್ಕರ ಜಗದ್ವೈತವಾಇತು ಬಾಹ್ಯಾಂತರದಂತೆ

೫, ನನ್ನದೆಶೆಇಂದ ಜಗದ್ವೈತವಡಗಿತು ಚಿನ್ನ ಉಂಗುರದಂತೆ

೬, ನನ್ನ ಚೈತನ್ಯವೆಜಗ ನಿರವಯದಂತೆ

೦, ನನ್ನಲ್ಲಿ ನಾನಲ್ಲ ಮಹಾಪ್ರಭು ಸೂನ್ಯ, ರಾಮತೊ ಕಶಿನಾಥುಂಡು ಇಟ್ಲನಿಯೆ.

**ನಿವೃತ್ತಿ ವಿಭಕ್ತಿ.**

೧ ನಾನು ಜಗದಾಧಾರನು ಚಿತ್ರಗಳಿಗೆ ಪರದಿಯಂತೆ

೨ ನನ್ನನ್ನು ಜಡಶೇರಿ ಅಜಡವಾಇತು ಗ್ರಹಸೋಂಕಿದ ಮನುಷ್ಯನಂತೆ

ಶಿ ನನ್ನಿಂದ ಜಗನ್ನಿವೃತ್ತಿಯಾಇತು ಕರ್ಮವುಪ್ಪಜ್ಞಾನ ಫಲವಂತೆ

ವ ನನಗೋಸ್ಕರ ಜಗತ್ಪದಾರ್ಥಭೋಗ್ಯವಾಇತು ದೃಗ್ ದೃಶ್ಯದಂತೆ

ಯ ನನ್ನದೆಶಿಇಂದ ಜಗತ್ಸಂಕೋಚ ವಿಕಾಸವಾಇತು ಮು ಚಿಟ್ಟೆ ಘೇರೆಯಂತೆ

ಓ ನನ್ನ ಸ್ವರೂಪನೆಜಗತ್ತು ಹ್ರಸ್ವಶೇಷದೀರ್ಘದಂತೆ

○ ನನ್ನಲ್ಲಿ ನಾನಲ್ಲ ನಿರ್ವಾಣೆಯಂತೆ

ಅರ್ಧ ಚಂದ್ರ ಪೂರ್ಣ ಚಂದ್ರ.

ಲೌಕಿಕ | ಅ ಉ | ವೈದಿಕ




ಪರಮಾರ್ಥ.

| | | |
|---|---|---|
| ೧ ಭಾತಿ | ೧ ಅಸ್ತಿ | ೧ ಪ್ರಿಯ |
| ೨ ಚಿತ್ತ | ೨ ಸತ್ತು | ೨ ಆನಂದ |
| ೩ ಬ್ರಂಹ | ೩ ವಿಷ್ಣು | ೩ ರುದ್ರ |
| ೪ ದಂಟು | ೪ ಹಾಲು | ೪ ಕಾಳು |
| ೫ ಹಸ್ತ | ೫ ಹೃದಯ | ೫ ನೇತ್ರ |
| ೬ ಇಷ್ಟ | ೬ ಪ್ರಾಣ | ೬ ಭಾವ |
| ೭ ಅಶ್ವಿನಿ | ೭ ಕೃತ್ತಿಕ | ೭ ಭರಣಿ |
| ೮ ಸೂರ್ಯ | ೮ ಜ್ಞಾನಾಗ್ನಿ | ೮ ಚಂದ್ರ |
| ೯ ನಾದ | ೯ ಕಲೆ | ೯ ಬಿಂದು |
| ೧೦ ವಾಕ್ಕು | ೧೦ ಶಬ್ದ | ೧೦ ರಸನ |
| ೧೧ ಇಲ್ಲದ್ದು | ೧೧ ಕಾಣುವದು | ೧೧ ಇರೋದು |

ಪಕಾರ ರಾಜಯೋಗ ಸ್ವತಂತ್ರವುಂಟು
ಪಂಡಿತಾರಾಧ್ಯರು ಮಾಡುವ ಉಪದೇಶ.

| | | |
|---|---|---|
| ೧೨ ಹೊರಗೆ | ೧೨ ಸಾಕ್ಷಿ | ೧೨ ಒಳಗೆ |
| ೧೩ ಕ್ರಿಯಾಶಕ್ತಿ | ೧೩ ಇಚ್ಛಾಶಕ್ತಿ | ೧೩ ಜ್ಞಾನಶಕ್ತಿ |
| ೧೪ ಧ್ಯಾನ | ೧೪ ಧ್ಯಾತೃ | ೧೪ ಧ್ಯೇಯ |
| ೧೫ ಪುಷ್ಪ | ೧೫ ಕುಸುಮ | ೧೫ ಬೀಜ |
| ೧೬ ತನು | ೧೬ ಧನ | ೧೬ ಮನ |
| ೧೭ ಗುರು | ೧೭ ಲಿಂಗ | ೧೭ ಜಂಗಮ |
| ೧೮ ಕಾಲ | ೧೮ ವಸ್ತು | ೧೮ ದೇಶ |
| ೧೯ ಶ್ರದ್ಧೆ | ೧೯ ಸಮಾಧಾನ | ೧೯ ನೈಷ್ಠೆ |
| ೨೦ ಅಲ್ಪಜ್ಞ | ೨೦ ಪೂರ್ಣಜ್ಞ | ೨೦ ಶಾಸ್ತ್ರಮರ್ಮಜ್ಞ |
| ೨೧ ರೇಚಕ | ೨೧ ಕುಂಭಕ | ೨೧ ಪೂರಕ |

ವ್ಯಕ್ತಾ
ವ್ಯಕ್ತ
ವಾಗಿರು
ವದು ವಿ
ನಾದ
ಶಃ—

ಏನೊಂದಿಲ್ಲದ
ಯಾರಿಗು ಕಾಣಿಸದ
ಅಸ್ತಿ | ಸತ್ತು.

ಇಚ್ಛಾ

ಶಬ್ದ
ಸ್ಪರ್ಶ
ರೂಪ
ರಸ
ಗಂಧ

ಬ್ರಹ್ಮಾಂಡ.

ಪಿಂಡಾಂಡ.

ಅಸ್ತಿಯೆನ್ನುವದು ಇಲ್ಲದ್ದು ಭಾತಿ ಪ್ರಿಯ ಎನ್ನುವದು ಕರ್ಮದ್ವಾರದಲ್ಲಿ ಕಾಣುವದು. ಇಚ್ಛೆಯೆ ಕಾರಣ ಬ್ರಹ್ಮನಾಗಿ, ಕರ್ಮವೆ ಕಾರ್ಯಬ್ರಹ್ಮನಾಗಿ ಕಾಣುವದು. ತತ್ - ತ್ವಂ ಅಸಿ ಎಂದಹಾಗೆ ಇರುವದು. ಸುತ್ತಿರುವ ಸಿಪ್ಪೆಯೆ ಮಾಯ ಒಳಗಿರುವ ಕುಸುಮವೆ ಮಾಯ. ಇದಕ್ಕೇನೆ ಮಾಯಾ ಶಕ್ತಿ ಎನ್ನುವರು. ಅಂದರೆ ಮರವಿ ಕಾಮರವೆಯುಂ ಕಳದರೆ ಸಿಪ್ಪೆ

ಯುಂ ತೆಗೆದ ಬೀಜವು ಫಲಿಸದಿರುವ ಧರ್ಮವಾದಂತೆ ಈ ಮರವೆಯುಂ ಕಳೆದ ಭಕ್ತನು ಷಟ್ಸ್ಥಲ ಜ್ಞಾನಿಯಾದ ಅನಾದಿಭಕ್ತನು ಈಭಕ್ತಿಸ್ಥಲ ಬಸವಣ್ಣಗೆ ಸಾಧ್ಯವಾಗಿತ್ತು. ಮಹೇಶಸ್ಥಲ ಮಡಿವಾಳ ಮಾಚಯ್ಯಗೆ ಸಾಧ್ಯವಾಗಿತ್ತು. ಪ್ರಸಾದಿ ಸ್ಥಲ ಸಿದ್ಧರಾಮೇಶ್ವರಗೆ ಸಾಧ್ಯವಾಗಿತು. ಪ್ರಾಣಲಿಂಗಿಸ್ಥಲ ಅಜಗಣ್ಣಗೆ ಸಾಧ್ಯವಾಗಿತ್ತು. ಶರಣಸ್ಥಲ ಮಹದೇವಿಗೆ ಸಾಧ್ಯವಾಗಿತ್ತು. ಐಕ್ಯಸ್ಥಲ ನಿಜಗುಣಗೆ ಸಾಧ್ಯವಾಗಿತ್ತು.



ಅವಯವಗಳಿಲ್ಲದ [ ○ ] ಶೂನ್ಯವು.

ಓ

ಅ ಉ ಮ ನ ಮ ಶಿ ವ ಯ ಓಂ
೧ ೨ ೩ ೪ ೫ ೬ ೭ ೮ ೯

ಒಂಭತ್ತರ ಸಂಖ್ಯೆ ಪರಮಾತ್ಮನ ಇಚ್ಛಾಮಾತ್ರದಿಂದ ಅನಂತವಾಗಿ ಯಲ್ಲದರಲ್ಲಿಯು ಒಂದೇ ಒಂಭತ್ತಾಗಿ ಪರಮಾತ್ಮನೇ ವ್ಯಾಪಕನಾಗಿರುವದು. ಅನಂತವು ಕೂಡಿದರೆ ಒಂಭತ್ತಾಗಿಯೇ ಉಳಿಯುವದು. ಜೀವಕೋಟಿಗಳೆಲ್ಲ ನೋಡಿದರು ಶಿವಲಿಂಗಗಳಾಗಿರುವವು. ಈ ಲೆಖ್ಖದ ಮಧ್ಯದ ಅಂದರೆ ಇವುಗಳ ಮಧ್ಯದಲ್ಲಿ ಇರುವದನ್ನು ಕೂಡಿದರೆ ಮೂರಾಗಿಯೇ ಇರುವದು.

ಇವೇ—ಗುರು, ಲಿಂಗ, ಜಂಗಮ.
ದೇಹ, ಪ್ರಾಣ, ಜ್ಞಾನ.
ವಾಕ್ಕು, ರಸನ, ಶಬ್ದ.

ಈ ಮೂರು ಅ ಉ ಮಾ ಕ್ಷರಗಳಾಗಿರುವವು. ಮೂರು ಒಂದಾಗಿಯೇ ನಿಂತಿರುವದು ಪರಮಾತ್ಮ.

| | | |
|---|---|---|
| ೯ | ೧ | ೯ |
| ೯ | ೨ | ೧೮ |
| ೯ | ೩ | ೨೭ |
| ೯ | ೪ | ೩೬ |
| ೯ | ೫ | ೪೫ |
| ೯ | ೬ | ೫೪ |
| ೯ | ೭ | ೬೩ |
| ೯ | ೮ | ೭೨ |
| ೯ | ೯ | ೮೧ |
| ೯ | ೧೦ | ೯೦ |
| ೯ | ೧೧ | ೯೯ |
| ೯ | ೧೨ | ೧೦೮ |
| ೯ | ೧೩ | ೧೧೭ |
| ೯ | ೧೪ | ೧೨೬ |
| ೯ | ೧೫ | ೧೩೫ |
| ೯ | ೧೬ | ೧೪೪ |
| ೯ | ೧೭ | ೧೫೩ |
| ೯ | ೧೮ | ೧೬೨ |
| ೯ | ೧೯ | ೧೭೧ |
| ೯ | ೨೦ | ೧೮೦ |
| ೧೮೦ | ೨೧೦ | ೧೮೯೦ |
| ೯ | ೩ | ೧೮ |
| | | ೯ |

## ಹಸ್ತಪರುಷದ ವಿಧಾಯಕ.

ಗುರುಗಳಲ್ಲಿ ಕಾಯಿ ಮತ್ತು ಕರ್ಪೂರವನ್ನಿಟ್ಟು ಸಾಷ್ಟಾಂಗಹಾಕಿದರೆ ಅದೇಕಾಯನ್ನೆ ಗುರುಗಳು ಹಸ್ತಸ್ಪರ್ಶನ ಮಾಡಿಕೊಡುತ್ತಾರಲ್ಲ ಯಾತಕ್ಕೆ ಕೊಡುತ್ತಾರೆ. ಅಂದರೆ ಶಿಷ್ಯನಸ್ಥೂಲಕಾಯವನ್ನು ಸೂಕ್ಷ್ಮಕಾಯವನ್ನು ಅಂದರೆ ಶ್ಲೋ॥ ಉರಸಾಶಿರ ಸಾದೃಷ್ಟ್ಯಾಮನಸಾವಚಸಾತಥಾ. ಪದ್ಭ್ಯಾಂಕರಾಭ್ಯಾಂ ಕರಣಾಭ್ಯಾಂ ಪ್ರಣಾಮೋಷ್ಟಾಂಗಮುಚ್ಯತೆ ಇವೇಮುಂತಾದ ಸಾಷ್ಟಾಂಗ ಪೂರ್ವಕವಾಗಿ ಸಮರ್ಪಿಸಿದರೆ ಆವರ ಚಿತ್ತ ಸಂತೋಷದಿಂದ ಶಿಷ್ಯನಮಾಂಸ ಕಾಯವನ್ನು ಕಳೆದು ಹಸ್ತ ಸ್ಪರ್ಶನ ಮಾತ್ರವೇ ಉರಿಕರ್ಪೂರವಾದಂತೆ ಮಂತ್ರಕಾಯವಾಗುವದು ಆ ಮಂತ್ರಕಾಯವನ್ನೇ ಗುರುಗಳು ಪುನಃ ಅನುಗ್ರಹವೆಂಬ ಆಶೀರ್ವಾದವಂಮಾಡುತ್ತಾರೆ ಅಂದರೆ ಜ್ಯೋತಿಯೊಗುರುವು ಕರ್ಪೂರವೇ ಶಿಷ್ಯನು ಗುರುವಿನೊಳಗೆ ಇರುವ ಶಿಷ್ಯನಿಗೆ ಬೇರೆಸ್ವತಂತ್ರ ಉಂಟೆ ಇಲ್ಲ ಉರಿಯೊಳಗಿರುವಕರ್ಪೂರಕ್ಕೆ ಬೇರೆಕ್ರಿಯು ಉಂಟೆ ಇಲ್ಲಕಾಯಿಯು ಒಂದುಗುರುತ್ತಳಿದ್ದಾಯಿತು.

## ಜಾಗ್ರಕ್ಕ್ಯ ಸ್ವಪ್ನಕ್ಕ್ಯ ಭೇದವೆ ಅಭೇದವೆ.

ಸ್ವಪ್ನವು ಒಂದು ನಿದ್ರೆಯಲ್ಲಿ ಒಂದೇಕ್ಷಣಕ್ಕೆ ಅಂಡಜ ಪಿಂಡಜ ಉದ್ಭಿಜ ಜರಾಯುಜ ಸ್ವೇದಜ ಮತ್ತು ಬ್ರಹ್ಮ ಕ್ಷತ್ರಿ ವೈಶ್ಯ ಶೂದ್ರ ಮತ್ತು ಸ್ವರ್ಗ ನರಕ ಇವೇಮುಂತಾದವುಗಳು ಅನೇಕವಾಗಿ ಹೋಗುವವು ಯೆಂದನಂತೆ ಜಾಗ್ರದಲ್ಲಿಯುಸಹ ವರ್ಣಾಶ್ರಮಾಚಾರ ಸುಖದುಃಖಗಳು ಕಾಲ ಕಾಮ ಕರ್ಮ ಇವೇಮುಂತಾದವುಗಳು ಆಲಸ್ಯದಿಂದಾಗಿ ಹೋಗುವವು ಅಂದರೆ

ಸ್ವಪ್ನವು ಶೀಘ್ರವಾಗಿ ಜನಿಸಿ ಶೀಘ್ರವಾಗಿಲಯವಂಪೊಂದಿ ಕಡಿಗೆ ಏನೊಂದು ಇಲ್ಲದೆ ತಾನೆತಾನೆ ಉಳಿಯುವಂತೆ ಜಾಗ್ರವು ಆಲಸ್ಯವಾಗಿಜನಿಸಿ ಆಲಸ್ಯವಾಗಿಲಯವಂ ಒಂದಿಕಡಿಗೆ ತಾನೆ ತಾನಾದ ನಿಜವಸ್ತು ಒಂದೇ ಉಳಿಯುವದರಿಂದ ಸ್ವಪ್ನಕ್ಕೂ ಜಾಗ್ರಕ್ಕೂ ಶೀಘ್ರಾಲಸ್ಯಭೇಧವೆವಿನಃ ಮತ್ತೇನುಭೇದವಿಲ್ಲ

**ಮತ್ತು ಜಾಗ್ರದೊಳಗೆ ಜಾಗ್ರಯಾವುದಂದರೆ.**

ಜ್ಞಾನೇಂದ್ರಿಯಗಳೈದು ಕರ್ಮೇಂದ್ರಿಯಗಳೈದು ಶಬ್ದಾದಿ ವಿಷಯಗಳೈದು ಕರಣಗಳು ನಾಲ್ಕು ಮಾಯೆಯು ಒಂದು ವಾಯುಗಳುಹತ್ತು ಭೂತಗಳು ಐದು ಅಂತುಮೂವತ್ತೈದರೊಳಗೆ ಆತ್ಮ ಸುಚಲಿಸುವದುಂಜಿಟ್ಟು ಭ್ರೂಮಧ್ಯದಲ್ಲಿ ಅಂದರೆ ಧೇಹಜೀವದಮಧ್ಯದ ಹೃದಯ ಕಮಲದಲ್ಲಿ ಚಿತ್ತವಿಶ್ರಾಂತಿಯು ಒಂದಿದ ಕಾಲದಲ್ಲಿ ತೇರೆನ್ನು ಶೃಂಗರಿಸಿನಿಲ್ಲಸಿ ದಂತಾಗುವದು ಕಾಣದೆಕಂ ಮಕ್ಕಳವೆ ಕೇಳುತ್ತಿರುವನು ಇದಕ್ಕೇನೆ ದೂರದರ್ಶನ ದೂರ ಶ್ರವಣವೆಂದು ಹೇಳುವದು.

**ಸ್ವಪ್ನದೊಳಗೆ ದೊಡ್ಡ ಸ್ವಪ್ನಯಾವದಂದರೆ.**

ಕಲ್ಪಕಾಲನಿರ್ಣಯ ಇದನ್ನು ಏಕೋರಾಮಾ ರಾಧ್ಯರು ತಿಳಿಸುವರು ಕಾವಿಶಾಟಿಯನ್ನು ಏತಕ್ಕೆಧರಿಸಬೇಕು.

ಪೀತವರ್ಣದ ಕಾವಿಬಟ್ಟೆಯಿನ್ನು ಯಂಥವರು ಏತಕ್ಕೆಧರಿಸುತ್ತಾರೆಂದರೆ ಈದೇಹವು ಪೀತವರ್ಣವುಳ್ಳದ್ದು ಈಭೂಮಿಯುಪೀತವರ್ಣವುಳ್ಳದ್ದು ಈಭೂಮಿಯು ಸ್ವಲ್ಪಮೃತ್ತಿಕೆಯನ್ನು ಸುಟ್ಟರೆ ಪೀತವರ್ಣವೇ ಆಗುವದು ಪಂಚಭೂತಾತ್ಮಕವಾದ ಈದೇಹವನ್ನು ಜ್ಞಾನಾಗ್ನಿಯಿಂದ ಸುಟ್ಟಂಥದೇಹಾಭಿಮಾನವಂ

ತ್ಯಜಿಸಿದ ಶಿವಯೋಗಿಯ ಶರೀರವೇ ಪೀತಪರ್ಣದ ದಗ್ಧಪಟದಂ
ತೆ ಆಗಿರುವದು ಇದು ಒಂದುಗುರ್ತುಳ್ಳದ್ದಾಯಿತು.

## ಹಾವಿಗೆಯನ್ನು ಯಾರು ಏತಕ್ಕೆ ಧರಿಸಬೇಕು.

ಒಂಭತ್ತುತೂತಾದ ಯೀದೇಹವೆಂಬ ಘಟದಲ್ಲಿ ಪ್ರಾಣ ವೆಂಬನೀರು ತುಂಬಿರಲು ಕೆಲವುಕಾಲ ಇದ್ದದ್ದೇಪುಣ್ಯವಲ್ಲದೆ ಈ ರಂಧ್ರಗಳಲ್ಲಿ ಸೋರಿಹೋಗುವದೇನು ಆಶ್ಚರ್ಯವಲ್ಲ ಮೇ ಧನಂ ಮೇ ವನಿತೆ ಮೆ ಸುತಂ ಮೆ ಬಂಧು ಎಂದು ಪರಮಾತ್ಮನಂ ಮರತು ಮೇ ಮೇ ಏಂದರಸುವ ಪುರುಷಾಕಾರದ ಮೇಕೆಯ ನ್ನು ಯಮನೆಂಬ ತೋಳನು ಮುರಿದುತಿನ್ನುವದರಿಂದಲೇ ದು ರ್ವರ್ತನವಂತ್ಯಜಿಸಿ ಸನ್ಮಾರ್ಗದಿಂವರ್ತಿಸುವಾತನು ಮತ್ತು ಕುಲಾಲನಹಾವಿಗೆಮೇಲಿರುವಮಡಿಕೆಯು ಅನಿತ್ಯವಾದ್ದೆಂಬಂತೆ ಈಘಟವೂಕೂಡ ಅನಿತ್ಯವಾದ್ದೆಂದು ತಿಳಿದವೈರಾಗ್ಯರು ಹಾವಿ ಗೆಯನ್ನು ಮೆಟ್ಟುವರು.

## ಅಭಿಮಾನವಂತ್ಯಜಿಸುವಿಕೆ.

ಧನಿಕನ್ನಗೃಹದಲ್ಲಿ ನೌಕರಿಮಾಡುವ ಮನುಷ್ಯನು ತನ್ನ ದೆಂಬಂತೆ ಜಮಾಖರ್ಚು ವಗೈರೆಕೆಲಸಗಳು ಪ್ರತಿನಿಧಿಯಾಗಿ ಮಾಡುತ್ತಾ ಮಾಡಿಸುತ್ತಾ ಯಿರುವನು ಆಧನಿಕನಿಗಿರ್ದುವ ಸುಖ ದುಃಖಗಳು ನೌಕರನಿಗೆ ಇರುವದಿಲ್ಲ ಏತಕ್ಕೆ ಅಂದರೆ ವಾಂಗ್ಮಾ ತ್ರದಿಂದ ನನ್ನದೆಂದು ಅನ್ನುವನಾದ ಕಾರಣ ಅವನಿಗೆ ಸುಖದುಃ ಖವಿಲ್ಲ ಧನಿಕನು ಮನಃಪೂರ್ವಕವಾಗಿ ನನ್ನದೆಂದು ನುಡಿಯು ವನಾದ್ದರಿಂದ ಅವನಿಗೆ ಸುಖದುಃಖ ಉಂಟಾಗುವದು ಮನಃ ಪೂರ್ವಕವಾಗಿ ಅಚ್ಚಿಕೊಂಡ ಅಭಿಮಾನಕ್ಕೆ ಕೊರತೆಬಂದಲ್ಲಿ ಅತ್ಯಂತವಾಗಿ ದುಃಖವಾಗುವದು.ಹಾಗೆ, ಮತ್ತು ಸಾಹುಕಾ

ಪಾಗರಸೇದಾಧ್ಯಾಯನಕಾಲದಲ್ಲಿ ತೊಂಬತ್ತೊಂಬತ್ತು ಹುಡುಗರಧ್ವನಿಯುನ್ನು ಬಿಟ್ಟು ತನ್ನಮಗನಕಂಠಪಲ್ಲಿ ಹೊರಡುವಧ್ವನಿಯುನ್ನು ಪಾತ್ರಕೇಳಿ ಆನಂದಬಡುವಂತೆ ಮತ್ತು ವ್ಯಭಿಚಾರಿಣಿಯು ಮನೆಕೆಲಸದಲ್ಲಿ ಪೂರ್ಣವಾಗಿದ್ದು ಅಗಲಿರುಳು ತನ್ನಿಷ್ಟಪುರುಷನಲ್ಲಿ ಚಿತ್ತವಿಟ್ಟಂತೆ ಪ್ರಪಂಚಕೆಲಸದಲ್ಲಿ ಪೂರ್ಣವಾಗಿದ್ದಾಗ್ಯೂ ಅಭಿಮಾನವುತ್ಯಜಿಸಿ ಪರಮಾತ್ಮನಲ್ಲಿಯು ಚಿತ್ತವಿಟ್ಟು ಸರ್ವವೂ ಈಶ್ವರಾಧೀನವು ಆತನಪರಿಣಾಮಗುಣಗಳೇ ಜಗತ್ ಸೃಷ್ಟಿ ಸ್ಥಿತಿ ಲಯವು ನಮ್ಮಗಳಿಗೆಲ್ಲ ಕರ್ತೃವೇ ಈಶ್ವರನು ಆತನಿಗೆ ನಾವುಗಳುಭೃತ್ಯರು ಸುಖದುಃಖಗಳೇನು ಯಿಲ್ಲವೆಂದು ತಿಳಿದಾಚರಿಸುವರು ಸಂಸಾರದೊಳಗಿದ್ದರೂ ಮೋಕ್ಷವುಂಟಾಗುವದು ಪ್ರ ದ್ವಿ ೬ ನೇ ಅಧಿಕರಣ.

**ಮಹಾಮಾಯಯ ಪರ್ಯಾಯನಾಮಗಳು.**

೧. ಸಕಲಾತ್ಮರನ್ನ ತನ್ನೊಳಗೆ ಅಡಗಿಸಿಕೊಂಡಲ್ಲಿ ಕುಟಿಲೆ ಎಂಬನಾಮವು.

೨. ಆತ್ಮರಂಬಿಡದೆ ಮೂಲಾಧಾರದೊಳಗಿರುವಲ್ಲಿ ಕುಂಡಲಿನಿ ಎಂಬಹೆಸರು.

೩. ತ್ರಿವಿಧಾತ್ಮರವರ್ಗವನ್ನು ಪ್ರೇರಿಸುವ ಕಾಲದಲ್ಲಿ ಮಹಾಮಾಯೆ.

೪. ಜಗನ್ಮಯನಾದಶಿವನೇ ಬಹುಮೂರ್ತಿಯಾದಲ್ಲಿಶಕ್ತಿ.

೫. ಪ್ರಸಾದಮನ್ಯನಿಂತಲ್ಲಿ ಮಾಯೆ.

೬. ಮಂತ್ರದೊಳ್ ಮುಖ್ಯತೆಯಂ ತೋರುವಲ್ಲಿವೈಧವ್ಯೆ.

೭. ತತ್ವರಾಶಿಗಳಲ್ಲಿ ನಿಂತಲ್ಲಿ ಪರಬ್ರಂಹೇ.

೮. ಅಕ್ಷರಸಮೂಹದಲ್ಲಿ ನಿಂತಲ್ಲಿ ಪ್ರಣವು.

೯. ನಿಜವ್ಯಾಪ್ತಿಯಿಂದಲ್ಲೆಲ್ಲಿಯು ವಿಕಾರವಾದಲ್ಲಿಪತಿಯು.
೧೦. ಮರವೆಯು ಒಂದಲ್ಲಿಮಲವು.
೧೧. ಶಕ್ತಿತತ್ವಮಂತ್ತೋರುವಲ್ಲಿ ಪ-ಬಿಂದುವು.
೧೨. ಆತ್ಮನಂನಡಸಿ ಭೋಗವನುಣಿಸುವಲ್ಲಿ ಮೋಹಿನಿಯು.
೧೩. ಸಕಲ ಕ್ರಿಯಾದಿಗಳಂ ಮಾಡಿಸುವಲ್ಲಿಮಾನಿಯು.
೧೪. ಮಾಯಾತ್ಮರು ನಡಿಯುವದಕ್ಕೆ ಸ್ಥಾನವಂಮಾಡುವಲ್ಲಿ ಅಧ್ವವು.
೧೫. ತಾನೇಸೂಕ್ಷ್ಮಕಾಯವಾದಲ್ಲಿ ತನುವು.
೧೬. ಅಂತಃಕರುಣವನ್ನುಂಟು ಮಾಡುವಲ್ಲಿಕರುಣವು.
೧೭. ಭುವನವಿಸ್ತಾರದಿಂ ವಿಕಾರವಾದಲ್ಲಿ ಭಾವನವು.
೧೮. ಅಮೃತಾನ್ನಮೊದಲಾದ ಮುಖ್ಯವಸ್ತುಗಳಂ ಕೋರುವ ಕಾಲದಲ್ಲಿ ಭೋಗವು.
೧೯. ಶುದ್ಧತತ್ವಮುಖವಾಗಿ ಕರಣದಿಂವಿಕಾರವಾದಲ್ಲಿ ಶುದ್ಧ ಮಾಯೆಯು.
೨೦. ಬೇಡಿದವರಿಷ್ಟಮಂ ಕೊಡುವಲ್ಲಿ ಉಪಾದಾನವು.
೨೧. ಶಿವತತ್ವವೊಂದನ್ನೆ ತೋರಿವಲ್ಲಿ ಶಿವನಾಮವು.
೨೨. ಮತ್ತೇನು ಇಲ್ಲದೆತಾನೆ ನಿಂತಲ್ಲಿ ನಿರ್ಮಲನಾಮವು.
೨೩. ಅಶುದ್ಧಮಾಯೆಯಂ ನಡಸುವಲ್ಲಿ ಬಿಂದುವು.
೨೪. ಅಂಗದಲ್ಲಿ ಪ್ರಕಾಶವಾಗುವದರಿಂನಾದವು.
೨೫. ಎಲ್ಲಕ್ಕೆ ಮೇಲಾದುದರಿಂ ಪರನಾಮವು.
೨೬. ಈಮೊದಲಾದವೆಲ್ಲ ವೂನಿಜದಿಂದಾಗಿರುವಕಾರಣ ಅನಂ ತಾಖಿದಾನವು.
೨೭. ಆತಿಳಿದತತ್ವಗಳಲ್ಲಿ ಕೂಡಿನೆನಹುಟ್ಟಿಸದ ಕಾಲದಲ್ಲಿ ಅವ್ಯ ಕ್ತನಾಮವು.

೨೮. ಆತ್ಮರಿಗೆ ಅನೇಕರೂಪಗಳಂಕುರಣಿಸುವವರಲ್ಲಿಪುರುಷನಾಮವು.

೨೯. ಸರ್ವನಂತೋರಿ ತೋರದಿರುವಲ್ಲಿ ಅನಾಮಯನಾಮವು.

೩೦. ವೇದವಾಕ್ಯನಂತಿಳಿಯುವಲ್ಲಿ ಅನಾಹತನಾಮವು.

೩೧. ಎಲ್ಲೆಲ್ಲಿಯುಲಲಿತವಾಗಿ ತೋರುವಲ್ಲಿ ಪರಿಪೂರ್ಣವೆಂಬ ಹೆಸರು.

ಈ ಮೂವತ್ತೊಂದುನಾಮವು ವ್ಯವಹಾರದಿಂದ ತೋರುವವು.

**ಗುರುಗಳಕಟ್ಟಳೆ.**

ಯಾ ಪುಸ್ತಕವನ್ನು ಓದಿತಿಳಿದರೆಸಾಕು ಮತ್ತು ಗುರುಗಳಿಂದ ಉಪದೇಶ ಮತ್ತು ಉಪನಯನವೆಂತ ಮಾಡಿಸಿಕೊಳ್ಳುವ ವೇತಕ್ಕೆ ಅಂದರೆ ಆಯಾಯ ಮತಗಳಲ್ಲಿಯೇ ಒಬ್ಬೊಬ್ಬ ಆಚಾರ್ಯರುತಮ್ಮತಮ್ಮ ಮತಸ್ಥಾಪನಮಾಡಿದ್ದಾರೆ ಅದ್ದರಿಂದ ಆಯಾಯಮತಾನುಸಾರವಾಗಿಯೇ ಬ್ರಹ್ಮವನ್ನು ನೋಡಿತಿಳಿಯಬಹುದಾದ್ದರಿಂದ ಸರ್ವಸಮ್ಮತಿಯಾದ ಬ್ರಹ್ಮವೊಂದಕ್ಕೇನೆ ಮತವೆಂತ ಹೆಸರಾಗಿರುವದು ಮತೆಯಂದರೆ ಸಮ್ಮತವಾದದ್ದು (ರಾಜರ) (ಲಾ) ನಿಬಂಧನೆಗಳನ್ನು ಪುಸ್ತಕಗಳಲ್ಲಿ ಓದಿನೋಡಿದಮಾತ್ರಕ್ಕೆನೇ ಅಪರಾಧಿಗಳಿಗೆ ಶಿಕ್ಷೆ ವಿಧಿಸುವದಕ್ಕೆ ಬರುವದಿಲ್ಲ ರಾಜರ ಅನುಜ್ಞೆಯಂಹೊಂದಿ ಅಪರಾಧಿಗಳಿಗೆ ಶಿಕ್ಷೆವಿಧಿಸಬಹುದು ಹಾಗೆ ಈಪುಸ್ತಕವನ್ನು ಓದಿತಿಳಿದಮಾತ್ರಕ್ಕೆನೆ ಗುರುವೆಂತಭಾವಿಸಲಿಕ್ಕೆ ಬರುವದಿಲ್ಲ ಗುರುವಿನ ಅಪ್ಪಣೆಯಂಪಡೆದು ಉಪನಯನ ಮತ್ತು ಉಪದೇಶ ಯಿವುಗಳನ್ನು ಪಡಕೊಂಡರೆ ಈಮತದಕಟ್ಟಳೆಗೆ ಒಳಗಾಗಿದ್ದಾನೆಂತ ಭಾವಿಸಬೇ

ಲಾಗುತ್ತದೆ ಪ್ರ ತ್ರು ೧೦ ನೇ ಅಧಿಕರಣ ಮತ್ತು ಬ್ರ ತ್ರು ೩ ೮ ೯ ೧೦ ೧೧ ನೇ ಅಧಿಕರಣವನ್ನು ನೋಡು. ಅಧಿಕಾರತಾರತಮ್ಯಾನುಸಾರ ಉಪದೇಶವಂ ಅನುಗ್ರಹಿಸಿ ಯಿದಕ್ಕೆ ತಪ್ಪಿದ ಶಿಷ್ಯನಿಗೆಸ್ಮೃತ್ಯಾಚಾರಕ್ಕೆ ಬಹಿಷ್ಕೃತನನ್ನಾಗಿ ಮಾಡುವರು.

ಯಲ್ಲಾ ಅಗ್ನಿಯು ಒಂದೇ ಆದಾಗ್ಯು ಸುಡುಗಾಡಲ್ಲಿರುವ ಅಗ್ನಿಯು ನಿಷೇಧವೆಂದು ತ್ಯಜಿಸಿದಂತೆ ನಾನು ನನ್ನದೆಂಬುವ ದಿರುವವರಿಗುವಿಧಿ ನಿಷೇಧಗಳನ್ನು ಅಂಗೀಕರಿಸಬೇಕು.

(ಪದ್ಯ) ನಾಕೆಂಟಂಗುಲಿ ಮೀರಿದಮಿಜೀಯಿಗ ಬೇಕೆಲಾಸ್ತ್ರಾ
ಭ್ಯಾಸಗಳು | ಲೋಕದಗತಿಯನು ನಾಕಿದವಗೆ
ಕ್ರಿಯೆಯಾಕೆಂದೆನುತಲಿ ಪ್ರಭುನುಡಿದ ||

**ವೇದವುಪೌರುಷೇಯವೋ ಅಪೌರುಷೇಯವೋ.**

| | | |
|---|---|---|
| ೧ ನೇ ಯವನು ಆತ್ಮಾ | .... | ಆತ್ಮದಾಕಾಶ ಸಂಭೂತ |
| ೨ ನೇ ಆಕಾಶ | .... | ಆಕಾಶದ್ವಾಯು |
| ೩ ನೇ ವಾಯು | .... | ವಾಯೋರಗ್ನಿ |
| ೪ ನೇ ಅಗ್ನಿ | .... | ಅಗ್ನೇರಾಪಃ |
| ೫ ನೇ ಅಪ್ಪು | .... | ಅಪೋಃಪೃಥ್ವಿ |
| ೬ ನೇ ಪೃಥ್ವಿ | .... | ಪೃಥಿವ್ಯಾಃ ಓಷಧಿ |
| ೭ ನೇ ಓಷಧಿ | .... | ಓಷಧ್ಯಾದ್ಧನ್ನಃ |
| ೮ ನೇ ಅನ್ನ | .... | ಅನ್ನಾದ್ರೇತಃ |
| ೯ ನೇ ರೇತಸ್ಸು | .... | ರೇತಾತ್ಪುರುಷಃ |
| ೧೦ ನೇ ಪುರುಷ | | |

ಆತ್ಮನೈ ಪುರುಷ ಎಂಬುವಲ್ಲಿ ಪುರುಷ ಪ್ರಯತ್ನವೇ ಆತ್ಮ ಪ್ರಯತ್ನ. ಆತ್ಮ ಪ್ರೇರಣೆಯೇ ಪುರುಷನ ಕರ್ಮವಾಗಿಧೆ. ಇದರಿಂದ ಪೌರುಷೀಯವೆಂತಲೇ ಆಗುತ್ತದೆ. ತನ್ನಂ ಮರೆತು ಹತ್ತನೇಯವನು ದುಃಖಿಪಟ್ಟು ತನ್ನತಾನೇ ತಾನ್ಯಾರೆಂದು ಅನಂತರ ದುಃಖಿಪಟ್ಟು ವಿವೇಕಿಸಿ ತಿಳಿದುಪ್ಪ ಹತ್ತುಪ್ಪದಂತೆ ಸಿರುಮುತ್ತಾದಂತೆ ಆತ್ಮನೆ ಪುರುಷ ನಾನಾಗಿರುವೆ. ಎಂಬ ಸೋಹಂ ಭಾವದರಿವೇಮೋಕ್ಷ, ಮೋಕ್ಷಕ್ಕೆ ಈ ಎರಡಕ್ಷರದ ಜ್ಞಾನವೇಸಾಕು. ಲೋಮ ವಿಲೋಮವಾಗಿ ಮಾಡಿದಲ್ಲಿ ಆತ್ಮನೆ ಪುರುಷ, ಪುರುಷನೇ ಆತ್ಮ, ಆತ್ಮೇಚ್ಛೇಯೇ ಪುರುಷನ ಕ್ರಿಯವಾಗಿರುವದು. ಮೊದಲಿಗೂ ಒಂದೇ, ಅಂತ್ಯಕ್ಕೂ ಒಂದೇ, ಈ ಒಂದೇ ಬಿಂದುವಿನೊಡ ನಾಟದಿಂದ ಹತ್ತಾದಂತೆ ಬ್ರಹ್ಮಾಂಡ ಕೋಟಿಯಾಯಿತು. ಬಿಂದುಸೇರಿ ವಟವೃಕ್ಷದ ಬಿಳಿಲಿನಂತೆ ಅನಂತ ಬ್ರಹ್ಮಾಂಡವಾಗುವದು. ಬಿಂದುವೇ ಬೀಳಲು ಮೊದಲಿಗೂ ನಾನೆ ಅಂತ್ಯದಲ್ಲಿಯೂ ನಾನೇ ಎಂಬುವ ಜ್ಞಾನವು ನಿಶ್ಚಿಯವಾಗುವದರಿಂದ ಷಟ್‌ಸ್ಥಲಾಂಗಿಯಾದಶರಣನು ವೇದಾಂತಿಯಂತೆ ಅಗಲಿ ಕೂಡುವೆನೆಂಬ ಹಾದಿಸುವದಲ್ಲ. ಮತ್ತು ಸಿದ್ಧಾಂತಿಗಳಂತೆ ಜೀವನು ಅನಾದಿಕರ್ಮವಳಿದು ಶಿವ ಸಮಾನನಾದೆನೆಂಬ ಸಂಶಯವಿಲ್ಲವು. ಶಿವ ಸರ್ವೋತ್ತಮನು.

(ಪ್ರ) (ದ್ವಿ) ೧ನೇ ಅಧಿಕರಣ (ತೃ) (ಪ್ರ) ೫-೬ ನೆ (ಅ) ಮತ್ತು (ತೃ) (ತೃ) ೭ ನೇ (ಅ) (ತೃ) (ತೃ) ೩೦ ನೇ (ಅ)

**ವೀರಶೈವ ಲಕ್ಷಣ.**

ಆಚಾರಲಿಂಗ ಭಕ್ತಿಸ್ಥಲದ ನಿರ್ಣಯ. ಈಶ್ವರನೆ ಕರ್ತನು, ನಾನು ಭೃತ್ಯನು, ನಾನೇ ಸುಖಿಯಾಗಿದ್ದೇನೆ, ನನಗೆ ದುಃ

ಖಿಗಳೂ ಯಾವುಇಲ್ಲ. ಕರ್ತೃವಿನ ಮರೆತಲ್ಲೇ ದುಃಖವು ಪ್ರಾಪ್ತವಾಗುವದು. ಮಾಯಾಧ್ವಂಸಿಯಾದ ವಜ್ರಾಯುಧವು ಕೈಯ್ಯಲ್ಲಿರಲು ಸಂಶಯವೆಂಬ ಶತೃಗಳ ಭಯವುಂಟೇ? ಅದೇನಂದರೇ ನಾನೆಂಬ ಅಹಂಕಾರದ ಪರ್ವತವನ್ನು ಈಶ್ವರನೆಂಬ ವಜ್ರಾಯುಧವು ಭೇದಿಸುವದರಿಂದ ಈತನಿಗೆ ಯಾವಭಯವೂ ಇಲ್ಲದೆ ಸದಾ ಕರಕಮಲದಲ್ಲಿರುವ ಇಷ್ಟಲಿಂಗದಲ್ಲಿಯೇ ಲೀನವಂ ಹೊಂದಿರುತ್ತಾನೆ.

## ಅನುಶೈವ ಲಕ್ಷಣ.

ಗುರುಲಿಂಗೆ ಮಹೇಶ್ವರಸ್ಥಲದ ನಿರ್ಣಯ ಜೀವಕೋಟಿಗಳಲ್ಲಿ ಈತನಿಗೆ ಕರುಣಾರಸವುಳ್ಳ ಧರ್ಮವು ಇರುತ್ತೆ. ನಾನು ಬೇರೆ, ಅವನುಬೇರೆಂಬುವ ಚಿತ್ತಚಾಂಚಲ್ಯವ ಗುಣವಿರುವದಿಲ್ಲ. ಕೇವಲ ಅಹಿಂಸೆಯುದ ಇಚ್ಛೆಯು ನೆಲೆಗೊಂಡಿರುತ್ತದೆ. ಇವು ಎರಡು ಒಂದೇಯಾಗಿ ಇಷ್ಟಲಿಂಗವಾಗಿರುವದು. ಇವರು ಪ್ರತೀಕ ಧ್ಯಾನಿಗಳು.

## ಶುದ್ಧಶೈವ.

ಶಿವಲಿಂಗ ಪ್ರಸಾದಿಸ್ಥಲದ ನಿರ್ಣಯು ಪ್ರಾರಬ್ಧಾನುಸಾರವಾಗಿ ಬಂದು ಹೋಗುವ ಸುಖ ದುಃಖಗಳಿಗೆ ಈತನು ವಳಗಾಗಿರುವದಿಲ್ಲ. ಸಾಗರದೊಳಗಿರುವ ತರಂಗಗಳು ಸಾಗರದಲ್ಲಿಯೇ ಲೈಸುವಂತೆ ಅವನ ಮನದಲ್ಲಿ ತೋರುವ ಭ್ರಮೆಯು ಅವನ ಜ್ಞಾನದಲ್ಲಿಯೇ ಐಕ್ಯವಂ ಹೊಂದುವದರಿಂದ "ಸದಾಪ್ರಸಾದಸ್ತು ಪ್ರಸನ್ನತೆ" ಎಂಬ ಪ್ರತ್ಯಕ್ಷವಾದ ತೃಪ್ತಿಯನ್ನು ಹೊಂದಿರುತ್ತಾನೆ.

## ವಿಶೇಷ ವೀರಶೈವ ಲಕ್ಷಣ.

ಜಂಗಮಲಿಂಗ ಪ್ರಾಣಲಿಂಗ ಸ್ಥಲದ ನಿರ್ಣಯ ಸಮ ಸ್ತೇಂದ್ರಿಯಗಳಿದ್ದು ಆ ಇಚ್ಛೆಯಂತೆ ನಡಿಯದೆ ಅನಿಚ್ಛೆಯಿಂದಿರುವನು. ಈತನುಮಾಡುವದು, ನೋಡುವದು, ಕೂಡುವದು, ಇವೇ ಮುಂತಾದ ಕೃತ್ಯಗಳೆಲ್ಲ ಮಾಡಿ ಮುಗಿಸಿರುವನು. ಅದ್ದರಿಂದ ಈತನು ಕೃತಕೃತ್ಯನು ಇವು ಎರಡು ಒಂದೇಯಾಗಿ ಪ್ರಾಣಲಿಂಗವಾಯಿತು. ಇವರು ಅಹಂ + ಗ್ರಹಧ್ಯಾನಿಗಳು. ಪ್ರಸಾದಲಿಂಗ ಶರಣಸ್ಥಲದ ನಿರ್ಣಯ ಮಾಯೆಯು ನನ್ನನ್ನುಸೇರಿ ಇಷ್ಟು ವಿಶಾಲವಾದ ನಾಟ್ಯವಂ ನಾಡುವಳು ಒಂದುವೇಳೆ ಗಗನ ಪುಷ್ಪವಂತೋರಿಸುವಳು. ಒಂದುವೇಳೆ ಮೊಲದ ಕೋಂಬನ್ನು ತೋರಿಸುವಳು. ಮತ್ತೊಂದುಸಾರಿ ಬಂಜೆಯಮಗನಂ ತೋರಿಸುವಳೆಂದು ಅನ್ನುವನು. ಅವನಂ ಸಂತೋಷಕ್ಕಾಗಿ ಈ ಮಾಯೆಯು ಅವನ ಸಂಗಡಲೇ ಇದ್ದಾಗ್ಯೂ ಕಮಲ ಪತ್ರವು ನೀರ ನ್ನಂಟದಂತೆ ಹ್ಯಾಗೋ ಹಾಗೇ ಅವಳಿಗೆ ಭಿನ್ನನಾಗಿ ಈತನು ಚಿತ್ರಗಾರನಂತೆ ಬರಿಯುವದಕ್ಕೂ ಕೆಡಿಸುವದಕ್ಕೂ ಸ್ವತಂತ್ರನಾಗಿರುವನು. ಗೇರುಹಣ್ಣಿನ ಬೀಜದಂತೆ ಅಂಟಿಯು ಅಂಟದಂತಿರುವನು.

## ನಿರಾಭಾರಿ ವೀರಶೈವ ಲಕ್ಷಣ.

ಮಹಾಲಿಂಗ ಐಕ್ಯಸ್ಥಲದ ನಿರ್ಣಯ ಸತ್ವ ರಜ ಸ್ತಮೋ ಗುಣಗಳ್ಯಾವೂ ಇಲ್ಲದೆ ಸುಖ ದುಃಖಗಳಂಟದೆ ಜ್ಞಾನಾಜ್ಞಾನಗಳಂ ಕಳೆದುಳಿದು ಏನೊಂದಿಲ್ಲದುದೆ ಸಚ್ಚಿದಾನಂದಮಯ ಸ್ವರೂಪನು. ಮತ್ತು ಸುಷುಪ್ತಿಯಂತೆ ಇರುವನು. ಇವು ಎರಡು ಭಾವಲಿಂಗ ಪ್ರತೀಕ ಧ್ಯಾನಕ್ಕೂ ಅಹಂಗ್ರಹಧ್ಯಾನಕ್ಕೂ ಸಾಕ್ಷಿಯು.

## ಭವಸಮುದ್ರ.

ಒಬ್ಬ ಆತ್ಮನೇ ಅನಂತಾತ್ಮರಾಗಿ ಭವಸಮುದ್ರದಲ್ಲಿರುವರು. ನಾನು ಹೆಚ್ಚು ತಾನು ಹೆಚ್ಚು ಎಂಬ ಮಿತಿ ಇಲ್ಲದ ಮುದ್ರಾ ಸಮೇತ ಸಮುದ್ರದಲ್ಲಿ ಒಂದರ ಮೇಲೊಂದು ಹರಿದು ಬರುವ ತರತರ ಅಂಗಗಳೆಂಬ ತರಂಗಗಳುಳ್ಳ ಭವ ಸಮುದ್ರವು. ಒಂದೇ ಎರಡಾಗಿ ತೋರುವದು. ಇದರಲ್ಲಿ ಸ್ವಾತಿ ಬಿಂದುವಿನಿಂ, ಮುತ್ತಾಗಿ ಭವಸಮುದ್ರದೊಳಗಿರುವ ಪ್ರಾಣಿಗಳ ಶ್ರೋತ್ರಗಳಿಗೆ ಅಲಂಕಾರವಾಯಿತು. ಅಂದರೆ ತಮ್ಮ ಮಕ್ಕಳ ಶಬ್ದ ತನಗೆ ಹಿತವಾಯಿತು.

## ಚಿತ್ಸಮುದ್ರ.

ತರತರ ಅಂಗಗಳೆಂಬ ತರಂಗಗಳು ಜನಿಸದೆ ಇರುವ ನಿಸ್ತರಂಗಾಂಬುಧಿಯೇ ಚಿತ್ಸಮುದ್ರ ಇದನ್ನು ವಕ್ಕುಡಿತೆಯಿಂದ ಗ್ರಹಿಸಿದವನೇ ಅಗಸ್ತ್ಯನು. ಈತನು ಕೈಬಿಟ್ಟ ಭವಸಮುದ್ರದಲ್ಲಿ ಇಹಮಾತ್ರಾರ್ಥ ಫಲ ಭೋಗಂಗಳಂ ಅನುಭವಿಸಿ, ನಂತರ ಸದ್ಗುರೋಪದೇಶದಿಂ ಕೃಪೆಯಂ ಹಡದು ಪರಸ್ತ್ರೀಯರನ್ನು ಮಹಾ ದೇವಿಯರೆಂದು ಭಾವಿಸಿ ಚಿದಾಮೃತವನ್ನು ಸ್ವೀಕರಿಸುವವರೇ ಚಿತ್ಸಮುದ್ರದೊಳಗಿರುವ ಪ್ರಾಣಿಗಳು. ಇಹಪರಂಗಳೆಂಬೆರಡು ಚಿಪ್ಪುಗಳೊಳಗೆ ತನ್ನನಾದಿ ಚಿತ್ಕಳೆಯ ಬಿಂದುವೆಂಬ ಓಂಕಾರದ ಮುತ್ತು ಚಿತ್ಸಮುದ್ರದೊಳಗಿರುವ ಪ್ರಾಣಿಗಳ ಶ್ರೋತ್ರಗಳಿಗೆ ಅಲಂಕಾರವಾಯಿತು. ಹ್ಯಾಗಂದರೆ ದಶನಾದ ಹತ್ತು ಒಂದೇಯಾಗಿ ಹತ್ತೊಂಟಿಯಾಯಿತು. (ಬ್ರ) (ತೃ) ೩-ನ್ನೆನೇ ಅಧಿಕರಣ (ತೃ) (ತೃ) ೪-ನೆ ಅಧಿಕರಣ.

**ಶಿವಭಕ್ತರ ಕಥೆಗಳು.**

೧ ಶಿವನು ಮೆಚ್ಚಿಸಿ ಪಡಿಹೊನ್ನ ಪಡದ ನಂಬೆಣ್ಣನು, ಇವ ನಂತರ್ಭಾವ ಶಿವಾನುಭವದಿಂದ ಉಪಾಧಿಯಂ ಕಳಕೊಂಡನು.

೨ ಚೇರಮರಾಯನ ಎದುರಿಗೆ ಶಿವನು ನಾಂಟ್ಯಮಾಡುವದು ಬಿಟ್ಟು ಒಂದುದಿನ ನಂಬೆಣ್ಣನ ಆಡಕೇಳಲು ಹೊಗಿದ್ದಕ್ಕೆ ಅಸುವು ಬಿಡಲಿಕ್ಕೆ ಸಿದ್ಧನಾಗಲು. ಶಿವನು ಪ್ರತ್ಯೇಕ್ಷನಾದ. ಇವನಂತರ್ಭಾವ ಕ್ಷಣವಾದರು ಶಿವನನ್ನಗಲದಿರುವ ಜ್ಞಾನಿಯಿಯು.

೩ ಸೋಮಾಶಿ ಮಾರನು ನಂಬೆಣ್ಣನ ಸೂಳೆಯ ನನುಸರಿಸಿ ನಂಬೆಣ್ಣನಿಂದ ಶಿವನನ್ನು ತಾನುಮಾಡುವ ಯಜ್ಞಕ್ಕೆ ಕರೆದುಕೊಂಡು ಹೋಗಿ ಕುರೂಪಿಯಾದ ಶಿವನನ್ನು ಎಲ್ಲರೂ ದೂಷಿಸಿದಾಗ್ಯು ಸೋಮಾಶಿಮಾರನು ದೂಷಣೆಯನ್ನು ಕೇಳದೆ ಸಾಷ್ಟಾಂಗ ಮಾಡಿದ್ದಕ್ಕೆ ನಿಜರೂಪು ತೋರಿದನು. ಇವನಂತರ್ಭಾವ ದೂಷಣೆಗೆ ವಳಗಾಗದೆ ನಿರಹಂಕಾರಿಯಾಗಿಸರ್ವ ಜಗತ್ತೆಲ್ಲಾ ಶಿವಮಯವೆಂಬ ಭಾವ ಬಲಿತದ್ದರಿಂದ ನಿಜರೂಪು ತೋರಿದನು.

೪ ಕಲಿಕಾಮದೇವನು ನಂಬೆಣ್ಣನು ಶಿವನನ್ನು ಕುಂಟಣಿಗತನದಲ್ಲಿ ಮಾಡಿಕೊಂಡಿರುವನೆಂದು ನಂಬೆಣ್ಣನನ್ನು ಕೊಲ್ಲಬೇಕೆಂತ ಕಲಿಕಾಮದೇವನು ಯುದ್ಧ ಮಾಡುವಕಾಲದಲ್ಲಿ ಶಿವನು ಪ್ರತ್ಯಕ್ಷವಾದನು. (ಇವನಂತರ್ಭಾವ) ಇಬ್ಬರು ನಿರಹಂಕಾರಿಗಳಾದ್ದರಿಂದ ವಿವಾದಕ್ಕೆ ಆಸ್ಪದವಿಲ್ಲದೆಹೋಯಿತು.

೫ ನಂಬಿಯು ಭಕ್ತಮಹೇಶ್ವರರಿಗೆ ನಮಸ್ಕಾರಮಾಡದೆ ದೇವಾಲಯಕ್ಕೆ ಹೋದ್ದರಿಂದ ನಂಬಿಗೆ ಶಿವನಿಗ ಮೆರೆಮಿಂಡಿ ದೇವನು ಬಹಿಷ್ಕೃತಹಾಕಿ ನಂತರ ಶಿವಭಕ್ತರೇ ಶ್ರೇಷ್ಠರೆಂದೆನಿಸಿದನು. ಇವನಂತರ್ಭಾವ ದ್ವೈತಭಾವ ಇದ್ದುದರಿಂದ ಬಹಿಷ್ಕೃತನಾದನು.

೬ ತಿರುನೀಲಕಂಠನ ಮ್ಯಾಲೆ ವೇಶ್ಯಾಂಗನೆ ಮಾಲಿನಲ್ಲಿಕೂತು ಉಗುಳಿ ಕೃಪ ಹಡದದ್ದು ಸತ್ಯವತೀ ನೋಡಿ ಶಿವನಾಣೆ ನನ್ನ ಮುಟ್ಟಬ್ಯಾಡವೆಂಬುದಕ್ಕೆ ಎಂಭತ್ತು ವರುಷ ಮುಟ್ಟದೆ ಇರಲು. ಶಿವನು ಪರೀಕ್ಷಿಸಬೇಕೆಂದು ಚಿನ್ನದ ಬಟ್ಟಲು ಕೊಟ್ಟು ರಕ್ಷಿಸಬೇಕೆಂದುಹೇಳಿ ಕಾಶಿಗೆ ಹೋಗಿಬಂದ ನಂತರ ಕೇಳಲು ಚಿನ್ನದ ಬಟ್ಟಲು ಮಾಯವಾಗಿ ಎಷ್ಟು ಹುಡುಕಿದರೂ ಸಿಗದೆ ಇರಲು. ಒಬ್ಬರಿಗೊಬ್ಬರು ಕೈ ಹಿಡಿದು ಪ್ರಮಾಣ ಮಾಡಿರಿ ಎಂದು ಗಂಡ ಹೆಂಡರಿಗೆ ಶಿವನು ಹೇಳಲು ಪ್ರಮಾಣ ಮಾಡದೆ ಇದ್ದದರಿಂದ ಶಿವನು ತನ್ನ ಲೋಕಕ್ಕೆ ವೈದನು. (ಇವನಂತರ್ಭಾವ) ಶಿವಸ್ಮರಣೆಯಿಂದ ಸ್ವಸ್ತ್ರೀಯಳಾದ ಜ್ಞಾನ ಶಕ್ತಿಯುಂ ಕೂಡಿದ ಕಾರಣ ಪರಮೇಶ್ವರನು ಪ್ರತ್ಯೇಕ್ಷನಾದನು.

೭ ಮಾರನು---ಶಿವಭಕ್ತರಿಗೆ ಬೇಡಿದ್ದು ಕೊಟ್ಟು ದರಿದ್ರನಾದದ್ದು ಕಂಡು ಶಿವನು ಪರೀಕ್ಷಿಸಲಿಕ್ಕೆಬಂದು, ಮಳೆಯಲ್ಲಿ ನಡಗುತ್ತಾ ಇದ್ದೇನೆ. ನನಗೆ ಬೆಂಕೀ ಮಾಡಿಕೊಡಬೇಕೆಂದು ಕೇಳಲು ಕಟ್ಟಿಗೆಯಿಲ್ಲ ನೆನದಕಾರಣ ತನ್ನ ಮನೆಯ ಒಂದಂಕಣವನ್ನೇ ಕಿತ್ತು ಬೆಂಕಿಮಾಡಿದ್ದಕ್ಕೆ ನನಗೆ ಪಿತ್ತವಾಯಿತು ಜಾಗ್ರತಿಯಿಂದ ಆಹಾರ ಕೊಡಬೇಕೆಂದು ಕೇ

ಳಲು. ಮನೆಯಲ್ಲಿ ಧಾನ್ಯ ಇಲ್ಲದ್ದರಿಂದ ಹೊಲದಲ್ಲಿ ನಿನ್ನೆ ಬಿತ್ತಿದ ಸಾಲಿನಲ್ಲಿರುವ ಬೀಜಗಳನ್ನು ತಂದು ಅಡಿಗೆಮಾಡಿ ಹಿತ್ತಲಿಯಲ್ಲಿದ್ದ ಬಾಳೇಯಲಿಯನ್ನು ತರಲಿಕ್ಕೆ ಮಗನು ಹೋದರೆ ಹಾವು ಕಡಿದು ಸತ್ತದ್ದನ್ನು ನೋಡಿ ತಾಯಿ ಯು ಹೇಳದೆ ಆತಗೆ ಉಣಬಡಿಸುವ ಸಮಯದಲ್ಲಿ ಮಗ ನನ್ನು ಬಿಟ್ಟು ಉಣ್ಣುವದಿಲ್ಲೆಂದು ಹೇಳಲು ಅವನು ಊ ಟಮಾಡಿ ಮಲಗಿರುವನೆಂದು ತಾಯಿಯು ಹೇಳಲು ಶಿವ ನು ಒಪ್ಪದೆ ತಾಯಿಯ ಕಡೆಯಿಂದ ಕೂಗಿಸಿ ಮಗನನ್ನು ಬದುಕಿಸಿದನು. (ಇವರ ಅಂತರ್ಭಾವ) ಶಿವ ಸರ್ವೋತ್ತ ಮನೆಂಬ ಜ್ಞಾನ ಉದಿಸಿದ್ದುದರಿಂದ ಮಗನು ಜನ್ಮಪರ ಯಂ ಬಿಟ್ಟದರೂ ಸಹಾ ಇವರಿಗೆ ದುಃಖವಿರಲಿಲ್ಲಾ.

೮ ಅಮರನೀತಿಯು ಶಿವಭಕ್ತರಿಗೆ ಧರ್ಮಮಾಡುವದನ್ನು ಪ ರೀಕ್ಷಿಸಲಿಕ್ಕೆ ಶಿವನು ಬಂದು ತನ್ನಲ್ಲಿದ್ದ ಒಂದು ಕೌಪೀನ ವಂ ಕೊಟ್ಟು ಕಾಪಾಡು ಎಂದು ಹೇಳಿ ಕಾಶಿಗೆ ಹೋಗಿ ಪುನಹಾ ಬಂದು ಕೇಳಲು ಕೌಪೀನವು ಇದ್ದ ಸ್ಥಾನದಲ್ಲಿಯೆ ಮಾಯವಾಗಿತ್ತು. ಅದಕ್ಕೆ ಶಿವನು ಆಕೌಪೀನದ ಜತೆ ಇ ನ್ನೊಂದು ಕೌಪೀನವಿರುವದು ಇದರ ತೂಕ ಬಟ್ಟೆಯಕೊ ಡು ಎಂದು ಕೇಳಲು. ಮನೆಯಲ್ಲಿದ್ದ ಜವಳಿ ಬಟ್ಟೆಗಳೆಲ್ಲಾ ಹಾಕಿದರೂ ಮತ್ತು ಸತಿಸುತರು ಸಹಾ ಕೂತರೂ ತ್ರಾ ಸು ಸಮನಾಗಲಿರಲು. ತಾನೇ ತ್ರಾಸಿನಲ್ಲಿ ಕುಳಿತಿದ್ದಕ್ಕೆ ಸಮನಾಗಲು ಕೈಲಾಸಕ್ಕೆ ಸೈದನು. (ಇವರಂತರ್ಭಾವ) ನಾನು ನನ್ನದೆಂಬ ಅಹಂಕಾರ ಮಮಕಾರ ವಳಿದು ಶಿವ ಸತ್ತ್ರೀ ಆಗಿದೆ ಎಂಬ ತಿಳುವಿಕೆ ಇದ್ದ ಕಾರಣ ಕೈಲಾಸಪ್ರಾ

ಪ್ತಿ ಯಾಯಿತು.

೯ ಸಿರಿಯಾಳ ಶೆಟ್ಟಿ ಮಗುವನ್ನು ಕೊಲ್ಲಿಸಿ ಪುನಹಾ ಬದುಕಿಸಿಧನು. ನಿರಹಂಕಾರಿಗೆ ಸುಖದುಃಖಗಳಿಲ್ಲವೆಂಬ ಭಾವ.

೧೦ ಸಿಂಘು ಬಲ್ಲಾಳನು ಹೆಂಡತಿಯನ್ನು ಶಿವಭಕ್ತನಿಗೆ ಕೊಟ್ಟದ್ದಕ್ಕೆ ಆಹೆಂಡತಿಯು ಪಾರ್ವತಿಯಾಗಿ ಭಕ್ತನು ಶಿವನಾಗಿ ಪ್ರತ್ಯಕ್ಷವಾಗಿ ಕೈಲಾಸ ಪ್ರಾಪ್ತವಾಯಿತು. ಅಭಿಮಾನ ಪೋದರೂ ಸತ್ಕಾರ್ಯ ಬಿಡಬಾರದು.

೧೧ ಮುರುಘನು ಕಠಿಣವಾದ ತಪಸ್ಸನ್ನಾಚರಿಸಿದ್ದು ಕಂಡು ದೇವತೆಗಳು ತಮ್ಮೈಶ್ವರ್ಯಕ್ಕೆ ಧಾಳೀ ತರುವನೆಂಬ ಭಯದಿಂದ ಶಿವನಿಗೆ ಮರೆಯಿಡಲು. ಶಿವನು ನಿಮ್ಮ ಕ್ಷಣಿಕವಾದ ಐಶ್ವರ್ಯವಂ ಬಯಸುವನಲ್ಲಾ ಹೋಗ ಬಹುದೆಂದು ಕಳುಹಿ ಮುರುಘನಿಗೆ ನಿಜಪದತ್ವವಂ ಕೊಟ್ಟನು.

೧೨ ಅನ್ಯೆನಾರನು ಗಾನದಿಂದ ಶಿವನಂ ಮೆಚ್ಚಿಸಿದನು. ಇವನು ನಾದ ಬ್ರಹ್ಮೈಕ್ಯನು ವಾಕ್ಸಿದ್ಧಿಯುಳ್ಳವನು.

೧೩ ರುದ್ರಪಶುಪತಿಯು ಶಿವನು ವಿಷಪಾನ ಮಾಡಿದ್ದನ್ನುನೋಡಿ ಒಳಗೆ ನುಂಗಬೇಡವೆಂದು ಹೇಳಿದರೆ ಶಿವನು ನುಂಗುವದಿಲ್ಲ. ನನ್ನಮಾತಿನಮೇಲೆ ಅಪನಂಬಿಕೆ ಇದ್ದರೆ ಯಾವಾಗ್ಯೂ ನನ್ನ ತೊಡೆಯಮೇಲೆ ಕೂತುಕೊಂಡು ನೋಡುತ್ತಿರು ಎಂದು ತನ್ನ ತೊಡೆಯಮೇಲೆ ರುದ್ರಪಶುಪತಿಯನ್ನು ಕುಳ್ಳಿರಿಸಿಕೊಂಡನು. (ಇವನಂತರ್ಭಾವ) ಯಾವಾಗ್ಯೂ ಶೇಷಃ ಪ್ರಸಾದವಂ ಕಾಯುವನು.

೧೪ ಮಾನಕಂಜರನು ಮಂಗಲಕಾರ್ಯದಲ್ಲಿ ತನ್ನ ಹೆಂಡತಿಯ ಮುಡಿಯನ್ನು ಶಿವನು ಬೇಡಿದಕೂಡಲೆ ಕೊಟ್ಟದ್ದರಿಂದ ಶಿ

ವನು ಪ್ರತ್ಯಕ್ಷನಾದನು. ಅಭಿಮಾನ ಹೋದರೂ ಸತ್ಕಾರ್ಯ ನಿರತನು.

೧೫ ಓರಿ ಭಕ್ತನು ಭಸ್ಮಯಿಲ್ಲದವರು ಭೂಮಿಯಮೇಲೆ ಇದ್ದರೆ ಪಾಪಹೆಚ್ಚುತ್ತದೆಂದು ಒಬ್ಬ ಶೈವನಿಗೆ ಭಸ್ಮಧರಿಸಲು ಅವನು ಕ್ರೂರವಾಗಿ ಯುದ್ಧಮಾಡಲು ಮೃತಪಟ್ಟ, ಆ ಹೆಣವನ್ನು ರಾಜನಲ್ಲಿ ವಿಚಾರಣೆಗೆ ಹೋಗಿ ವಿಚಾರಿಸಲು ನಿನ್ನ ರಾಜ್ಯದಲ್ಲಿ ಪಾಪ ಹೆಚ್ಚುತ್ತದೆಂದು ಭಸ್ಮಧಾರಣಮಾಡಿದೆ ಅಂದನು. ರಾಜನು ಭಸ್ಮದಿಂದ ಇವನಂ ಬದುಕಿಸುವಿಯಾ ಅಂದದಕ್ಕೆ ಭಸ್ಮದಾರಣಮಾಡಿ ಆ ಶೈವನನ್ನು ಬದುಕಿಸಿದನು. ಇವನು ಭಸ್ಮ ಶ್ರೇಷ್ಟಿತನು.

೧೬ ಸೇದಿರಾಜನು ಶಿವಭಕ್ತರಲ್ಲಿ ವಿಶ್ವಾಸದಿಂದಿರುವದನ್ನುನೋಡಿ ಶಿವನು ಕಪಟವೇಷಹಾಕಿ ಕೇಳಿದ್ದನ್ನು ಕೊಡಬೇಕೆಂದು ಏಕಾಂತ ಸ್ಥಾನಕ್ಕೆ ಕರೆದುಕೊಂಡು ಹೋಗಿ ಒಂದುಪದಾರ್ಥವಂಕೊಟ್ಟು ಚನ್ನಾಗಿನೋಡು ಏನೇನು ಕಾಣುತ್ತಿದೆ ಎಂದು ತೋರಿಸುತ್ತಾ ಹಿಂದೆ ನಿಂತು ಬಾಕಿನಿಂದ ಕಪಟಯು ತಿವಿಯಲು ದೇವಾ ಇದಕ್ಕೆ ತನ್ನ ಹಸ್ತಗಳು ಎಷ್ಟು ನೊಂದವೋ ಎಂತ ಮರುಗುತ್ತಾ ತನ್ನ ನೋವನ್ನು ಸಹಿಸಿಕೊಂಡು ಕಚೇರಿಗೆ ಬಂದು ಆ ಕಪಟ ಸನ್ಯಾಸಿಗೆ ಬೇಡಿದುದನ್ನುಕೊಟ್ಟು ಪರಿವಾರವನ್ನು ಕರಿಸಿ ಮಗನಿಗೆ ಪಟ್ಟಾಭಿಷೇಕವನ್ನು ಮಾಡಿ ತಾನು ಬೆನ್ನಿನಲ್ಲಿ ನೆಟ್ಟಿರುವ ಕತ್ತಿಯನ್ನು ಕಿತ್ತು ಪಂಚಾಕ್ಷರಿ ಮಂತ್ರವನ್ನುಚ್ಚರಿಸುತ್ತಾ ತನ್ನ ಹಸುವಂ ಬಿಡುವಕಾಲದಲ್ಲಿ ಶಿವನು ಪ್ರತ್ಯಕ್ಷನಾದನು. ಇವನು ಕ್ಷಮೆಯಲ್ಲಿ ನಿರುತನು.

೧೭ ತಿರುಮೂಲದೇವರು ದನಕಾಯುವವನನ್ನು ಸರ್ಪ ಕಡಿದು ಸತ್ತುದ್ದಕ್ಕೆ ದನಗಳಿಗೆ ದಿಕ್ಕಿಲ್ಲವೆಂದು ಶವಕ್ಕೆ ಸಂಸ್ಕಾರವಿಲ್ಲದೆ ವ್ಯರ್ಥವಾಗುವದೆಂದು ತಿಳಿದು ಅವನ ಶರೀರದಲ್ಲಿ ಪರಕಾಯಪ್ರವೇಶ ಬಲ್ಲವನಾದ್ದರಿಂದ ಅದರಲ್ಲಿ ಹೊಕ್ಕು ತನ್ನ ಶರೀರವನ್ನು ಒಂದು ಗೋಪ್ಯಸ್ಥಾನದಲ್ಲಿಬಚ್ಚಿಟ್ಟು ದನಗಳನ್ನು ಅವರವರ ಮನೆಗಳಿಗೆ ಗೊತ್ತಾಗಿ ಹೊಡೆದು ಪಂಡತಿಯು ಮಾತನಾಡಿಸಿದರೆ ದೋಷ ಬರುವದೆಂದು ಮಾತನಾಡದೆ ಸುಮ್ಮನೆ ಇದ್ದುದಕ್ಕೆ ಜನರುನೋಡಿ ಗ್ರಹ ಸೋಂಕಿರುವದೆಂದು ದೂಷಿಸಿದ್ದಕ್ಕೆ ಈ ಶರೀರವಂ ಬಿಟ್ಟು ಸ್ವಂತ ಶರೀರವನ್ನು ಪ್ರವೇಶಿಸಬೇಕೆಂದು ಹೋಗಿನೋಡಲು ತನ್ನ ಶರೀರವು ತಾನು ಬಚ್ಚಿಟ್ಟ ಸ್ಥಳದಲ್ಲಿ ಇರಲಿಲ್ಲ. ನಾನು ಮಾಡಿದ ಅಹಂಕಾರಕ್ಕೆ ಶಿವನು ಪ್ರಾಯಶ್ಚಿತ್ತಕೊಟ್ಟ. ಇರಲಿ ಇದೇ ಶರೀರದಿಂದ ಶಿವನಂ ಪೂಜಿಸಿ ಮುಕ್ತಿಯಂ ಪಡೆಯುವೆನೆಂದು ಪೂಜಿಸಿದ್ದಕ್ಕೆ ಪ್ರತ್ಯಕ್ಷನಾದನು. ಶಿವನ ಕರ್ತೃತ್ವವನ್ನು ತಾನೇ ವಹಿಸಿಕೊಂಡದ್ದರಿಂದ ಪ್ರಾಯಶ್ಚಿತ್ತ ವಾಯಿತು.

೧೮ ನಮಿನಂದಿಯು ಶಿವಲಿಂಗ ಪೂಜಿಸಲಿಕ್ಕೆ ಹೋಗುವ ಕಾಲದಲ್ಲಿ ಅನೇಕ ಸಿಡಿಲು ಗುಡುಗು ಮಳೆಕತ್ತಲು ಇಷ್ಟುಪೀಡಿಸಿದರು ಅದರಲ್ಲಿಯೇಹೋಗಿ ದೇವಾ ನಿನ್ನೆದುರಿಗೆ ಅನೇಕ ಜನ್ಮಗಳೆಂಬ ವೇಷಗಳನ್ನು ಹಾಕಿಕೊಂಡು ಬಂದೆ ಆದರೂ ನೀನು ಮೆಚ್ಚಲಿಲ್ಲ. ಇನ್ನು ವೇಷಗಳನ್ನು ತರಬೇಡವೆಂದು ಹೇಳಬಾರದೆ ಎಂದು ಅನನ್ಯಭಾವದಿಂ ಪೂಜಿಸಿ ಹೋಗುವ ಕಾಲದಲ್ಲಿ ಕತ್ತಲಲ್ಲಿ ನೆಡಹಿ ಬಿದ್ದು ಹರ, ಹರ; ಎಂದ

ಮಾತ್ರಕ್ಕೆ ಶಿವನು ಪ್ರತ್ಯಕ್ಷನಾದನು. (ಇವನಿಗೆ ಚಿರಂಜೀವತ್ವದಲ್ಲಿ ಲಕ್ಷ್ಯವಿತ್ತು).

೧೯ ಮೇಳ್ಕೊಂತ ಮಹೇಶ್ವರನು ಗುರೋಪದೇಶವಂ ಪಡೆದು ಗುರುಚರಣ ಪಾದುಕೆಗಳಂ ತನ್ನ ಶಿರದಮೇಲೆ ಹೊತ್ತುಕೊಂಡು ಹೃದಯ ಕಮಲದಲ್ಲಿ ಏಕಾಗ್ರಚಿತ್ತದಿಂದಿರುವನಂ ಶಿವನು ಪರೀಕ್ಷಿಸಬೇಕೆಂದು ಪಂಚಮುಖ ಪಾರ್ವತಿ ಸಮೇತ ಬಂದು ಎಲೋ ನೀನು ಯಾರು? ಮಾತನಾಡು ನನ್ನನ್ನು ನೋಡು ಎಂದು ಪರಿಪರಿಯಿಂದ ಹೇಳಿದರೂ ಅವನುನೋಡದೆ ಮಾತನಾಡದೆ ಸುಮ್ಮನೆ ಇದ್ದುದಕ್ಕೆ ಎಲೋ ನಾನು ಪರಮೇಶ್ವರನಿದ್ದೇನೆ ನೋಡು. ಮನು ಮುನಿಗಳು ಎಷ್ಟೋಕೋಟಿ ತಪಸ್ಸಿದ್ಧರಿಗೂ ನಾನುಮಾತನಾಡುವನಲ್ಲ. ನಿಜರೂಪು ತೋರಿಸುವನಲ್ಲ. ಇಂಥವನಿಗೆ ನೀನು ಕಣ್ದೆರೆದು ನೋಡಲಿಲ್ಲ. ವಂದನೆಯನ್ನು ಮಾಡಲಿಲ್ಲ. ಇದೇನಾಶ್ಚರ್ಯವೆಂದುದಕ್ಕೆ ದೇವಾ ನಿನ್ನನು ಅಜ್ಞನನ್ನೇ ಕಾಣಲಿಲ್ಲ. ಗುರುಮೂರ್ತಿಯಾದ ನಿನ್ನಪಾದವನ್ನೇ ಶಿರದಮೇಲೆ ಇಟ್ಟುಕೊಂಡಿರುತ್ತಿರಲಿಕ್ಕೆ ಮತ್ತ್ಯಾವ ಪಾದಕ್ಕೆ ನಮಸ್ಕಾರ ಮಾಡಲಿ ಹೃದಯ ಕಮಲದಲ್ಲಿದ್ದ ಜ್ಞಾನಮೂರ್ತಿಯನ್ನು ಅವಲೋಕಿಸುತ್ತಿರಲಿಕ್ಕೆ ಮತ್ತ್ಯಾವಮೂರ್ತಿಯನ್ನು ನೋಡಲಿ. ಸರ್ವವು ನೀನಲ್ಲವೆಂದುದಕ್ಕೆ ಶಿವನು ಪ್ರತ್ಯಕ್ಷನಾದನು. (ಇವನು ಕೇವಲ ಶಿವಾದ್ವೈತನು.)



ದಕ್ಷಿಣ

ಶ್ರೋತ್ರ

ಓಂ.

ಅಗ್ನಿ ನೈಋ

ಪೂರ್ವ

| | | | | |
|---|---|---|---|---|
| ಮ॥ ಮರುಳಾರಾಧ್ಯ ಗುರು ಬೆಳ್ಳಿ ಕಲಶ. | ವ | ಯ | ನ | ಶಿ॥ ರೇವಣಾರಾಧ್ಯ ಗುರುತಾಮ್ರ ಕಲಶ. |
| ಯ | ಶಿ | ವ | ಮ | ನ |
| ಶಿ | ಮ | ನ॥ ಪಂಡಿತಾರಾಧ್ಯಗುರು ಚಿನ್ನದಕಲಶ | ಯ | ವ |
| ನ | ಯ | ಶಿ | ವ | ಮ |
| ವ॥ ಏಕೋರಾಮಾರಾಧ್ಯಗುರು ಕಬ್ಬಿಣಕಲ | ನ | ಮ | ಶಿ | ಯ ವಿಶ್ವಾರಾಧ್ಯ ಗುರುಸೀಸ ದಕಶಲ |

ಈಶಾನ್ಯ ಶಿಷ್ಯನಿಗೆ ವಾಯವ್

ಉತ್ತರ ಅಧಿಕಾರ.

ನಾನೆಂಬ ಅಹಂಕಾರವನಳಿಸಿ ಪೃಥ್ವಿಯು ಸುವರ್ಣಮಯ
ವಾದ್ದೆಂದರುಹಿ ನಿರುಪಾಧಿಕನನ್ನಾಗಿ ಮಾಡುವರು
ಕಣುವದೆಲ್ಲನಾನೇ

ದಕ್ಷಿಣ

ಶ್ರೀಸ್ವಾ ಓಂ. ಮಿಗಳು

ಅಗ್ನಿ ನೈರುತ್ಯ

ಪೂರ್ವ ಪಶ್ಚಿಮ

| | | | | |
|---|---|---|---|---|
| ಶಿ॥<br>ರೇವಣಾರಾ<br>ಧ್ಯಗುರುತಾ<br>ಮ್ರಕಲಶ | ಯ | ನ | ಮ | ವ॥<br>ಏಕೋರಾಮಾ<br>ರಾಧ್ಯಗುರು<br>ಕಬ್ಬಿಣದಕಲಶ |
| ನ | ವ | ಯ | ಶಿ | ಮ |
| ವ | ಶಿ | ಮ॥<br>ಮರುಳಾರಾ<br>ಧ್ಯಗುರುಬೆ<br>ಳ್ಳಿಕಲಶ | ನ | ಯ |
| ಮ | ನ | ವ | ಯ | ಶಿ |
| ಯ॥<br>ವಿಶ್ವಾರಾಧ್ಯ<br>ಗುರುಸೀಸದ<br>ಕಲಶ | ಮ | ಶಿ | ವ | ನ॥<br>ಪಂತಾರಾ<br>ಧ್ಯಗುರುಚಿ<br>ನ್ನದಕಲಶ |

ಈಶಾನ್ಯ ಶಿಷ್ಯನಿಗೆ ವಾಯುವ್ಯ

ಉತ್ತರ ಅಧಿಕಾರ

ಅಪ್ಪುವುಪರುಷಮಯವೆಂದು ನಿರಾಕೆಯಂತೋರಿಶಿ

ಸರ್ವಸಮತ್ವಮಂ ತೋರಿಸುವರು

ಯಲ್ಲಾ ಶಿವಮಯ

ದಕ್ಷಿಣ

ಶ್ರೀ ಓಂ. ಗುರು

ಅಗ್ನಿ ನೈರುತ್ಯ

ಪೂರ್ವ ಪಶ್ಚಿಮ

| | | | | |
|---|---|---|---|---|
| ನ॥ ಪಂಡಿತಾರಾಧ್ಯಗುರುಚಿನ್ನಡಕಲಶ | ವ | ಯ | ಶಿ | ಮ॥ ಮರುಳಾರಾಧ್ಯಗುರುಬೆಳ್ಳಿಕಲಶ |
| ಯ | ಮ | ವ | ನ | ಶಿ |
| ಮ | ನ | ಶಿ॥ ರೇವಣಾರಾಧ್ಯಗುರುತಾಮ್ರದಕಲಶ | ಯ | ವ |
| ಶಿ | ಯ | ಮ | ವ | ನ |
| ವ॥ ಏಕೋರಾಮಾರಾಧ್ಯಗುರುಕಬ್ಬಿಣದಕಲಶ | ಶಿ | ನ | ಮ | ಯ ವಿಶ್ವಾರಾಧ್ಯಗುರುಸೀಸದಕಲಶ |

ಈಶಾನ್ಯ ವಾಯುವ್ಯ

ಶಿಷ್ಯನಿಗೆ

ಉತ್ತರ ಅಧಿಕಾರ

ಜ್ಞಾನಾಗ್ನಿಯಪ್ರಕಾಶದಿಂ ಮಾಯಾಪ್ರಪಂಚರಚನೆಯಂಸುಟ್ಟು
ಜನ್ಮಪರಂಪರೆಯಂ ಬಿಟ್ಟುವದೇ ಆತ್ಮಶೇಷನೆಂಬ ಉಪದೇಶ
ಶಿವನೇ ಶೇಷ

ಗಾಂಗೇಯ

ದಕ್ಷಿಣ

ಓಂ.

ಅಗ್ನಿ — ನೈರುತ್ಯ

ಪೂರ್ವ — ಪಶ್ಚಿಮ

| | | | | |
|---|---|---|---|---|
| ಯ ವಿಶ್ವಾರಾಧ್ಯ ಗುರುಸೀಸದ ಕಲಶ | ಮ | ಶಿ | ವ | ನ॥ ಪಂಡಿತಾರಾಧ್ಯಗುರುಚಿನ್ನದಕಲಶ |
| ಶಿ | ನ | ಮ | ಯ | ವ |
| ನ | ಯ | ವ॥ ಏಕೋರಾಮಾರಾಧ್ಯಗುರು ಕಬ್ಬಿಣದಕಲಶ | ಶಿ | ಮ |
| ವ | ಶಿ | ನ | ಮ | ಯ |
| ಮ॥ ಮರುಳಾರಾಧ್ಯಗುರುಬೆಳ್ಳಿಯಕಲಶ | ವ | ಯ | ನ | ಶಿ॥ ರೇವಣಾರಾಧ್ಯಗುರುತಾಮ್ರದಕಲಶ |

ಈಶಾನ್ಯ — ವಾಯವ್ಯ

ಶಿಷ್ಯನಿಗೆ

ಉತ್ತರ ಅಧಿಕಾರ

ಮನಸ್ಸಿನಕಲ್ಪಿತವಂತ್ಯಜಿಸಿ ಹೃದಯಕಮಲದಲ್ಲಿ ಚಿತ್ತವಿಶ್ರಾಂತಿ ಎಂಬಸಮಾಧಿಯಂತಿಳಿಸುವಿಕೆಶಿವನೇಶೇಷನಾಗಿ ಉಳಿದನೆಂಬುವದಕ್ಕೆ ಚಿತ್ತವಿಶ್ರಾಂತಿ ಯಾಗುವದೇ ಗುರುತು

ಓಂ.

ಅಗ್ನಿ ಷಣ್ಮುಖ ನೈಋತ್ಯ

| | | | | |
|---|---|---|---|---|
| ಶಿ॥ ರೇವಣಾರಾಧ್ಯಗುರುತಾಮ್ರದಕಲಶ | ನ | ಮ | ಯ | ವ॥ ಏಕೋರಾಮಾರಾಧ್ಯಗುರು ಕರ್ಬಿಣದಕಲಶ |
| ಮ | ವ | ನ | ಶಿ | ಯ |
| ವ | ಶಿ | ಯ ವಿಶ್ವಾರಾಧ್ಯಗುರುಸೀಸದಕಲಶ | ಮ | ನ |
| ಯ | ಮ | ವ | ನ | ಶಿ |
| ನ॥ ಪಂಡಿತಾರಾಧ್ಯಗುರುಚಿನ್ನದಕಲಶ | ಯ | ಶಿ | ವ | ಮ॥ ಮರುಳಾರಾಧ್ಯಗುರುಬೆಳ್ಳಿಯಕಲಶ |

ಈಶಾನ್ಯ ಶಿಷ್ಯನಿಗೆ ವಾಯವ್ಯ

ಉತ್ತರ ಅಧಿಕಾರ

ಆಕಾಶವು ಆತ್ಮಮಯು ಆತ್ಮನುಸುಖಮಯವೆಂಬಜ್ಞಾನವೇ ಮೋಕ್ಷಜ್ಞಾನಾನ್ಮೋಕ್ಷವೆಂಬ ನಿಶ್ಚಯವಂತಿಳಿಸುವಿಕೆ ಅಂದರೆ ಹೃದಾಯಾಕಾಶದಲ್ಲಿ ಅತ್ಮನು ಸುಖಮಯನಾಗುವದೇಜ್ಞಾನ ಇದಕ್ಕೇನೆ ಹೃದಯಾಕಾಶ

ಆಕಾಶವು ಆತ್ಮವುಯ ಆತ್ಮನುಸುಖಮುಯನೆಂಬ ಜ್ಞಾನವೇ ಮೋಕ್ಷ. ಜ್ಞಾನಾನ್ಮೋಕ್ಷವೆಂಬ ನಿಶ್ಚಯವಂ ತಿಳಿಸುವಿಕೆ ಅಂದರೆ ಹೃದಯಾಕಾಶದಲ್ಲಿ ಆತ್ಮನು ಸುಖಮಯನಾಗುವವೇ ಜ್ಞಾನ. ಇದಕ್ಕೇನೇ ಹೃದಯಾಕಾಶ ಈ ಆಕಾಶದಲ್ಲಿ ಸತ್ತರೇ ಮೋಕ್ಷವಾಗುವದು. ಚಿತ್ತ ವಿಶ್ರಾಂತಿಯಾದುದಕ್ಕೆ ಎರಡನೆ ನಿಜಾನಂದವೇಗುರ್ತು ವಿಶ್ವಕಾಶಿಯಲ್ಲಿ ಸತ್ತರೆ ಕತ್ತೆಯಾಗುವನೆಂದು ವಾಡಿಕೆಯೇಇರುತ್ತದೆ. ನಂತರ ಶಿವ ಸಿದ್ಧ ದಯಾಧರ್ಮ ಗುರುಧರ್ಮ ಕೋರು ಧಾನ್ಯದ ಬಿಕ್ಷವೆಂದು ಅಂದು ಕೋತ ಬೇಡುವದಕ್ಕೆ ದಂಡ ಜೋಳಿಗೆಯನ್ನು ಹಿಡಿದುಕೊಂಡು ಹೋಗೆಂದು ಕಳುಹಿಸುವನು. ಈಗಲೂಕೂಡ ಯಡಗೈಯಲ್ಲಿ ಜೇವ ಹಿಡಿದುಕೊಂಡು ಒಬ್ಬನನ್ನು ಕೇಳಿದೆನು ಕೊಡಲಿಲ್ಲವೆಂದು ವಾಡಿಕೆ ಇರುತ್ತದೆ. ಅಂದರೆ ಶಿವನಲ್ಲದೆ ಅನ್ಯದೈವವಿಲ್ಲವೆಂಬುವದೇ ಸಿದ್ಧ. ಜೀವಿಗಳಲ್ಲಿ ದಯವುಳ್ಳದೇ ಧರ್ಮ ಇದು ಗುರುವಿನ ಧರ್ಮವು, ಕೋರುವೆನು, ಧಾನ್ಯದಭಿಕ್ಷ ಹೀಗೆ ಹೇಳಿಕೊಳ್ಳುತ್ತ ಹೋಗಬೇಕೆಂದು ಭಿಕ್ಷಕ್ಕೆ ಕಳುಹಿಸುವನು. ಪೃಥ್ವಿಯು ಸುವರ್ಣವುಯ, ಅಪ್ಪು ಪುರುಷವುಯ, ಅಗ್ನಿಯು ಪ್ರಕಾಶವುಯ, ವಾಯುವು ಪ್ರಾಣವುಯ, ಆಕಾಶವು ಆತ್ಮವುಯ, ಆತ್ಮನು ಸುಖಮುಯ. (ಪದ್ಯ) ಸುಖಮುಯವಾತ್ಮನು ಸುಖವಾತ್ಮನವುಯ | ಸುಖಪರಮಾತ್ಮರಿಗೇಕವಿದು ||
ಈ ಪಂಚಾಚಾರ್ಯರಂಬಿಟ್ಟು ತಮ್ಮಿಷ್ಟಕ್ಕೆ ತಾವೇ ಆಷ್ಟಾವರ್ಣಸಮೇತರಾದ ಭಕ್ತಮಾಹೇಶ್ವರರಾಗಿರುತ್ತೇವೆಂದು ಹೇಳುವದು ಹ್ಯಾಗಾಗುವದೆಂದರೆ ನಾಟಕದಲ್ಲಿ ರಾಜ ಮಂತ್ರಿ ಪ್ರಜ ಚೋರ ವಕೀಲ ಬಂಧ ಮೋಕ್ಷ ಇವುಗಳಂ ಕಲ್ಪಿಸಿಕೊಂಡಂತೆ ಆಗುವದು. (ಪ್ರ) (ದ್ವಿ) ೩ ನೆ ಅ.

ಪಂಚಕಲಶಗಳನ್ನು ಮತಕ್ಕೆ ಧರಿಸಬೇಕು ಇವುಗಳಿಗೆಲ್ಲಾ ಒಂದಕ್ಕೊಂದು ಸೂತ್ರಗಳನ್ನು ಮತಕ್ಕೆ ಹಾಕಬೇಕು ಯಾಕಂದರೆ ಪಾರಮಾರ್ಥಿಕದ ಪ್ರತಿಬಿಂಬವೇ ಲೌಕೀಕವಾಗಿರುವದು. ಆದ್ದರಿಂದ ಅಂತರಂಗದಲ್ಲಿದ್ದ ಅಷ್ಟಾವರಣಗಳನ್ನು ಬಹಿಷ್ಕರಿಸಿ ತೋರಿಸಿ ಕೈಯ್ಯಲ್ಲಿಕೊಟ್ಟ ಮತಸ್ಥಾಪನಾಚಾರ್ಯರು ಮುಖ್ಯವಾಗಿ ಮತಕ್ಕೆ ಕಲಶಪ್ರಾಯವಾಗಿರುವದರಿಂದ ಈ ಕಲಶಗಳನ್ನು ಆಯಾಯದಿಕ್ಕುಗಳಲ್ಲಿ ಮುಹೂರ್ತವಂ ಮಾಡಿಸಿ ಐಕ್ಯಮತಿಯುಳ್ಳ ಅಭಿಮಾನವೆಂಬ ಸೂತ್ರವಂ ಅಚ್ಚಿ ನನ್ನದೆಂಬ ಅಭಿಮಾನವೆಂಬ ಸೂತ್ರವನ್ನು ವಟುವಿನ ಹಸ್ತದಲ್ಲಿ ಕಟ್ಟಿ ಉಪನಯನವಂ ತೋರಿಸಿ ಕೊಡುವರು. ಆದ್ದರಿಂದ ಐದುಮಂದಿ ಐಕ್ಯಮತಿಯಿಂದ ಮಾಡಿದ ಕಾರ್ಯವು ಸಫಲವಾಗಿ ಈಗಲುಕೂಡ ಪರಿಣಮಿಸುವದು. ಈಷ್ಟೈಕಿ ಒಂದು ಸೂತ್ರವು ಹರಿದರೆ ನಿಷ್ಫಲವೇ ಆಗುವದೆಂಬುದು ಸರ್ವರಿಗೂ ವಿದಿತವಷ್ಟೇ ಈಐದು ಮಂದಿಯು ಸತ್ಯಾಸತ್ಯ ವಿಚಾರಮಾಡುವದೇ ಆಲೋಚನೆ ಈ ಆಲೋಚನೆಯೇ ಜ್ಞಾನಚಕ್ಷು ಇದೇ ಸಾಕ್ಷಿರೂಪವಾಗಿರುವ ನಿರಂಜನಮೂರ್ತಿ ಈತನ ಕಲಶವನ್ನು ಸಾಕ್ಷಿಯಾಗಿಟ್ಟುಕೊಂಡು ಮಾಡಿದರೆ ಪರಮಾತ್ಮನು ಇಂಥ ಕಾರ್ಯಗಳನ್ನು ಅಂಗೀಕರಿಸುವನು. ಸಾಕ್ಷಿ ವಿನಹ ಮಾಡಿದ ಕಾರ್ಯಗಳು ಈಗಲುಕೂಡ ಪರಮಾತ್ಮನಂತಿರುವ ನ್ಯಾಯಾಧಿಪತಿಯಾದ ರಾಜನು ಅಂಗೀಕರಿಸಲಾರನು. ಅಂದರೆ ಜ್ಞಾನವಿಲ್ಲದೆ ಮಾಡಿದ ಪಂಚಾಯಿತಿಯನ್ನು ರಾಜನು ತಿರಸ್ಕರಿಸುವನು. ಮ್ಯಾಪಿನೋಪಾದಿಯಲ್ಲಿರುವ ಕಲಶಗಳಿಂದ ಸಹಜವಾದ ಆಚಾರ್ಯರನ್ನು ತಿಳಿಯಬೇಕು. ಕ

ಲಕಪ್ರಾಣಮಯವಾಗಿರುವ ಸಹಜವಾದಾಚಾರ್ಯರೇ ಕಲಶರೂಪವಾಗಿ ಪ್ರತಿಬಿಂಬಿಸಿರುವರು. ಪಂಚಸೂತ್ರ ಸರಿಯಾಗಿರುವ ಲಿಂಗವು ಶ್ರೇಷ್ಠವೆಂದಾಯಿತು. ಮತ್ತು ಭಕ್ತಿ ಮುಕ್ತಿಪ್ರಸಾದ ಸ್ವರೂಪವಾದ ಕಾರಣ ಶೇಷ ಶಬ್ದಕ್ಕೆ ನಿರ್ವಾಚ್ಯ. ಪ್ರಪಂಚವು ಅಂದರೇ, (ಪ್ರ) ಪ್ರಥಮ (ಪಂಚ) ಐದು, ಪ್ರಪಂಚದಲ್ಲಿ ಐದು ಗುಡಾರಗಳಲ್ಲಿ ಭಕ್ತಿ ಮುಕ್ತಿ ಪ್ರಸಾದವಂ ಕೊಡುವರು. ಕೊಡುವನ್ಯಾರಂದರೆ (ಶೇಷ) ವ್ಯವಹಾರದಲ್ಲಿ ಎರಡಾಯಿತು. ಪಾರಮಾರ್ಥಿಕದಲ್ಲಿ ಒಂದಾಯಿತು. ಕೊಡುವದೇ ಇಚ್ಛೆ. ತೆಗೆದುಕೊಳ್ಳುವದೇ ಆಶೆ. ಇಚ್ಛೆಯೇ ಇಷ್ಟ. ಸರ್ವರಿಗೂ ಇಷ್ಟಲಿಂಗವಾಗಿರುವದು. ಈ ಇಷ್ಟಲಿಂಗವನ್ನು ಹಸ್ತದಲ್ಲಿ ತೋರಿಸಿ ಕೊಟ್ಟು ತೆಗೆದುಕೊಳ್ಳುವದೇ ಪ್ರಾಣಲಿಂಗವಾಯಿತು. ಗುಡಾರಗಳಲ್ಲೆಲ್ಲಾ ವ್ಯಾಪಕವಾಗಿರುವ ಅದುಇದು ಎಂಬುವದೇ ಭಾವಲಿಂಗವಾಯಿತು. ಅದಕ್ಕೂ ಇದಕ್ಕೂ ಅತೀತವಾಗಿರುವದು ಮತ್ತೊಂದು. ಅವನಿವನು ಮತ್ತೊಬ್ಬನು. ನಾನು ನೀನು ತಾನೇ ತಾನು. ಅವನು ಸತ್ತು ಇವನು ಚಿತ್ತು. ತಾನೇ ಆನಂದಸ್ವರೂಪನು. ಅವನು ಕೊಡುವನು ಇವನು ತೆಗೆದುಕೊಳ್ಳುವನು. ಮತ್ತೊಬ್ಬನು ಎಲ್ಲವಂನೋಡುವನು. ಅವನು ತನ್ನನ್ನು ಬಿಟ್ಟು ಕೊಡುವದನ್ನು ನೋಡುವನು. ಇವನು ತನ್ನನ್ನುಬಿಟ್ಟು ತೆಗೆದುಕೊಳ್ಳುವದನ್ನು ನೋಡುವನು. ಮತ್ತೊಬ್ಬನು ಅವನನ್ನು ಇವನನ್ನು, ಅದನ್ನು ಇದನ್ನು ಮತ್ತೊಂದನ್ನು ತನ್ನನ್ನು ಸಹಾ ನೋಡುವನು. ನೋಡುವನೇ ಸಾಕ್ಷಿರೂಪನು. ಈ ಜೋತಿಯೇ ಪ್ರಪಂಚ ನಾಟಕವನ್ನು ಪ್ರಕಾಶಪಡಿಸುವ ನಾಟಕ ದೀಪವಾಗಿರುವದು. ಪಂಚಮುಖದಲ್ಲಿ ಜನಿಸಿದ ಆಚಾರ್ಯರು

ಜ್ಞಾತಿಗಳೋ ಬಂಧುಗಳೋ ಅಂದರೆ ಮಂಪುನಾರಾಂಪ ರಸಗತ ನ್ಯಾಯದಂತೆ ವರ್ಣಗಳು ಪ್ರತ್ಯೇಕವಾಗಿರುವದರಿಂದ ಒಂದೇ ವರ್ಣದಲ್ಲಿ ಒಂದೇವರ್ಣವಂಸೇರಿಸಿದರೆ ಉತ್ಪತ್ತಿಯಾಗಲಾರದು ಒಂದು ವರ್ಣದಲ್ಲಿ ಮತ್ತೊಂದು ವರ್ಣವಂ ಸೇರಿಸಿದರೆ ಮತ್ತೊಂದು ವರ್ಣವಾಗುವದು. ಇದು ಜಗದುತ್ಪತ್ತಿಗೆ ಕಾರಣ ವಾಯಿತು.

## ಚತುಃಕರಣಗಳ ಶುದ್ಧಿ.

ಇವನ ಬುದ್ಧಿ ಹೀಗೆ ಅದೆ ಎನ್ನುವದು ಹ್ಯಾಗೆ ಈ ಕಣ್ಣಿನಿಂದ ತಿಳಿಯಬೇಕು. ಅಂದರೆ ಇವನು ಮಾಡುವ ವಿವೇಕ ಕರ್ಮದಿಂದ ತಿಳಿಯ ತಕ್ಕದ್ದು. ಇವನ ಮನವು ಹೀಗೆ ಅದೆ ಎನ್ನುವದು ಹ್ಯಾಗೆ ಈ ಕಣ್ಣಿನಿಂದರಿಯಬೇಕು. ಅಂದರೆ ಇವನು ವಿಚಾರಮಾಡುವ ಸತ್ಯಾಸತ್ಯವಚನದಿಂದರಿಯ ತಕ್ಕದ್ದು. ಇವನ ಚಿತ್ತವು ಹೀಗೇ ಅದೆ ಎನ್ನುವದು ಹ್ಯಾಗೆ ಈ ಕಣ್ಣಿನಿಂದ ಗುರ್ತಿಸಬೇಕು. ಅಂದರೆ ಇವನು (ಗಳಿಸಿದ) (ಅರ್ಜಿಸಿದ) ಧನಧಾನ್ಯ ಮತ್ತು ಪತಿಸುತರಂ ತೆಗದುಕೊಂಡರು ನಿರಾಶಯಿಂ ಸಂತೋಷದಿಂದಿದ್ದದ್ದೇಗುರ್ತು. ಇವನ ಅಹಂಕಾರವು ಹೀಗೆ ಅದ ಎನ್ನುವದು ಹ್ಯಾಗೆ ಈಕಣ್ಣಿನಿಂದ ನಿಶ್ಚಯಿಸಬೇಕು. ಅಂದರೆ ಇವನನ್ನು ಎಷ್ಟುಬಂಧಿಸಿದರು ಕ್ಷಮೆಯಿಂದಿದ್ದರೆ ಅಹಂಕಾರವು ನಾಶವಾಗಿದೆ ಎಂದು ನಿಶ್ಚಯಿಸಬೇಕು.

೧-ನೇ ವಿವೇಕ, ೨-ನೆ ಸದ್ವಿಚಾರ, ೩-ನೇ ಸಂತೋಷ ೪-ನೇ ಕ್ಷಮ. ಈ ನಾಲ್ಕರ ಪೈಕಿ ಯಾವದಾದರೂ ಒಂದು ಗುಣವಿದ್ದರೆ ಸಾಕು. ಈ ನಾಲ್ಕು ಮೋಕ್ಷಕ್ಕೆ ಮುಖ್ಯಗುಣಗಳಾಗಿ

ರುವವು. ಹೀಗಿದ್ದರೆ ಈಶ್ವರನು ಪ್ರೀತಿಸಿ ಮೋಕ್ಷವಂ ಕೊಡುವನು.

ಮತ್ತು ತೆಪ್ಪದಿಂದ ನದಿ ದಾಂಟಿದವನ ತೆರೆಗಳಂತೆ ಶಿವಭಕ್ತಿಯಿಂದ ಶ್ರೇಷ್ಠನಾದ ಇವನಿಗೆ ಭವಬಂಧನೆಂದಿಗೂ ತಾಕುವದಿಲ್ಲ. ಮನ, ಬುದ್ಧಿ, ಚಿತ್ತ, ಅಹಂಕಾರಗಳಲ್ಲಿ ಬೆರತು ಬೆರಿಯದೆ ಜ್ಞಾನವು ಸಾಕ್ಷಿರೂಪವಾಗಿ ಬೇರೆ ಇರುವದು. " ಪ್ರಜ್ಞಾನಂ ಬ್ರಹ್ಮ" ಜ್ಞಾನವಿಲ್ಲದೆ ಮನ, ಬುದ್ಧಿ, ಚಿತ್ತ, ಅಹಂಕಾರಗಳಿದ್ದರೂ ಉಸುರಾಡುವ ಎಣವಿನಂತೆ; ಹುಚ್ಚನಂತೆ, ಪಿಶಾಚಿಯಂತೆ ಇರುವರು. ಮಹಾಘೋ ಮಹಾಘೋರ ಗಾರ್ಭೋ ಏಕರಾಶಿ. ದೇವೋ ಗಾವೋ ಬ್ರಾಹ್ಮಣೋ ಏಕರಾಶಿ.





ಪಶ್ಚಿಮ ಮುಖವಾಗಿರುವ ರಜ ರಕ್ಷರತಿ ಪಾಲಕಾಷಿಣಿ ಸಂಜೀವಿನಿ ಕ್ರಿಯೆ ಪ್ರಿಯೆ ವೃದ್ಧಿ ಧಾಯೆ ಧಾತ್ರಿ ಬ್ರಾಹ್ಮಣಿ ಮೋಹಿನಿ ಅಭಯೇ ಈ ಹದಿಮೂರು ಕಲೆಗಳಿಂದ ಕೂಡಿದ ವಾಮದೇವಮುಖದಿಂದ ಉದ್ಭವಿಸಿದ ಮರುಳಾರಾಧ್ಯರು ಜ್ಞಾನಶಕ್ತಿಯಿಂ ಚಿದಾನಂದರೂಪನಾಗಿ ಶ್ರೀಸದ್ಧರ್ಮ ಸಿಂಹಾಸನವೆಂಬ ಪಶ್ಚಿಮದಿಕ್ಕಿನಲ್ಲಿ ತಮ್ಮ ಸಿಂಹಾಸನದ ಗುರ್ತನ್ನು ಸ್ಥಾಪಿಸಿರುವರು. ಅಹಂಕಾರವಳಿದ ಶಿವಭಕ್ತನ ಪರೀಕ್ಷಿಸಿ ಸ್ವಾಧಿಷ್ಠಾನ ಚಕ್ರವೆಂಬರೆ ಮಮಕಾರವೆಂಬ ಕಾಮಚಕ್ರವು ಯಾವಾಗ್ಯು ತಿರುಗುತ್ತಿರುವದು. ಇಂಥಾ

ಚಕ್ರದಲ್ಲಿ ಬಿದ್ದು ಸಾಯುವರನ್ನು ಕಡೆಗೆ ತೆಗದು ಉದ್ಧಾರವಂ ಮಾಡಿದ್ದರಿಂದ ಜಗದ್ಗುರುವೆಂಬ ನಾಮವಂ ಪಡದು ಲಿಂಗಪಾದೋದಕದಿಂ ತೃಪ್ತಿಯಂ ಹೊಂದಿಸಿ ಕೃತಕೃತ್ಯನನ್ನಾಗಿ ಮಾಡುವದರಿಂದ ಈ ಎರಡು ವರ್ಣಗಳಿಂಕೂಡಿದ ಉಪದೇಶವಂ ಮಾಡುವರು. ಮತ್ತು ಆಶೆಯುಳ್ಳವನು ಧೀರನಾದರು ಸರ್ವಜ್ಞನಾದರು ಪಂಜರಕ್ಕೆಬಿದ್ದ ಸಿಂಹದಂತೆ ವಶನಾಗುವನು ವಾಸನೆ ಇಲ್ಲದ ಪುರುಷನು ಮಶಕಪ್ರಾಯನಾದರೂ ಮೇರುವಿಗಿಂತಲು ಅಧಿಕನೆನಿಸುವನು. ದೇಹವೆಂಬ ವೃಕ್ಷದೋಳ್ ಹೃದಯವೆಂಬ ಗೂಡಿನಲ್ಲಿರುವ ಚಿತ್ತವೆಂಬ ಹಕ್ಕಿಗೆ ಆಶೆಯೇ ಬಲೆಯಾಗಿರುವವು. ಆತ್ಮನೆಂಬ ವೃಕ್ಷಕ್ಕೆ ಅಭಿಮಾನವೆಂಬ ಲತೆಯು ಸುತ್ತಿಕೊಂಡಾಕ್ಷಣ ಅಭಿಮಾನವೆಂಬ ಲತೆಗೆ ಬಾಧಕವಲ್ಲದೆ ಆತ್ಮನೆಂಬ ವೃಕ್ಷಕ್ಕೇನೂ ಬಾಧಕವಿಲ್ಲ. ಸೇನೆಗಳಂ ಮುರಿದವನಿಗೆ ಸೇನಾಪತಿಯು ಸ್ವಾಧೀನವಾಗುವಂತೆ ಇಂದ್ರಿಯಗಳಂ ಜೈಸಿದವನಿಗೆ ಮನವು ಸ್ವಾಧೀನವಾಗುವದು. ಯಾವನು ಇಂದ್ರಿಯಗಳಿಗೂ ಮನಸ್ಸಿಗೂ ಸ್ವಾಧೀನನಾಗದಿರುವನೋ ಆವನೇ ಪುರುಷನೆನಿಸುವನು. ಯಾವನು ಇಂದ್ರಿಗಳಿಗೂಮನಸ್ಸಿಗೂ ಸ್ವಾಧೀನನಾಗುವನೋ ಅವನನ್ನು ಪಶುವೆಂದು ಭಾವಿಸಬೇಕು. ಇವನು ಪರ್ವತಾಗ್ರದಿಂ ಉರಳಿದಕಲ್ಲು ಸಮುದ್ರವಂ ಸೇರುವಂತೆ ಶಿವಸ್ಮರಣೆಯಿಂದ ತ್ಯಜಿಸಿದ ಜೀವನು ಭವಸಮುದ್ರವಂ ಸೇರಿ ದುಃಖಿಸುವನು. ದೀಪ ಜ್ವಾಲೆಯಕೊನೆಯೋಳ್ ಕಪ್ಪಿನಂತೆ ಭೋಗದ ಕೊನೆಯೋಳ್ ರೋಗವು ಸಿದ್ಧವಾಗಿರುವದು. ಮುಖ್ಯಕಲ್ಪನೆಯಿಂದಲ್ಲವೇ ಚಿತ್ತ ಚಲಿಸುವದು. ಆತ್ಮನಿಗೆಲ್ಲಿಯದು ಕ್ಷೇತ್ರವಿಲ್ಲದ ಧಾನ್ಯದಂತೆ ಚಿತ್ತವಿಲ್ಲದ ಕಲ್ಪನೆ ಉದಿಸಲಾರದು

ಚಿತ್ತವಂ ಸುಟ್ಟರೆ ಪ್ರಪಂಚವೆಲ್ಲವನ್ನು ಸುಟ್ಟಂತಾಗುವದು. ಇವನಿಗೆ ಮಹಾನದಿಯುಂ ಕಂಡವನಿಗೆ ಕಾಲಿವಿಯಂತೆ ಸಹಜಾನಂದದ ರುಚಿಯುಂಕಂಡ ಜ್ಞಾನಿಗೆ ವಿಷಯಭೋಗಾಪೇಕ್ಷೆ ತಪ್ಪುವದು. ಧೊರೆಯು ವೇಷಾಂತರವಂ ಲೀಲಾರ್ಥವಾಗಿ ವಹಿಸುವಂತೆ ಈಶನು ಬಹುರೂಪನಾಗಬೇಕೆಂಬ ಸಂಕಲ್ಪದಿಂದ ಜೀವರೂಪನಾಗಿಋವನು. (ಬ್ರ) )ದ್ವಿ) (ಪ್ರ) ೧೧-ನೇ ಅ. ಯಾವಪ್ರಕಾರದಿಂದ ಲಾಗಲಿ ಒಂದು ಪ್ರಾಣಿಯಂ ಸಂತೋಷಪಡಿಸುವದೇ ಪೂಜೆಯನಿಸುವದು. ಪರಮಾತ್ಮನ ಜ್ಞಾನ ಚಮತ್ಕಾರಗಳೇ ಪ್ರಪಂಚವಾಗಿರುವಲ್ಲಿ ದ್ವೈತಾ ದ್ವೈತಾದಿ ವಾದಗಳಿಗೆ ಅವಕಾಶ ವೆಲ್ಲಿಯದು. ಅಯಸ್ಕಾಂತ ಸನ್ನಿಧಿಯಿಂದ ಸೂಜಿಯು ಚಲಿಸುವಂತೆ ದೇಹವು ಚಿತ್ತದಿಂದ ಚಲಿಲುವದು. ವಾತವೇಗದಿಂದಲ್ಲಾಡುವ ಎಲೆಗಳು ವೃಕ್ಷದ ಅಪರಾಧವೇನು? ಸುಖ ದುಃಖಗಳು ಆತ್ಮನನ್ನು ಹ್ಯಾಗೆ ಅಂಟುವವು? ಯಾವನು ಸ್ವಭಾವವಂ ಜೈಸದಿರುವನೋ ಅವನಿಗೆ ಮೊಳಲೆಣ್ಣೆಯಂತೆ ಪರಮಪದವು ದುರ್ಲಭವಾಗಿರುವದು. ಜಾತ್ಯಂಧನ ಚಿತ್ರ ದರ್ಶನದಂತೆ ಕರ್ಮಠನಿಗೆ ಸರ್ವ ಸಮತ್ವವು ಕಾಣುವದಿಲ್ಲ. ಕರ್ಮಠನಿಗೆ ಯಾವದನ್ನೋಡಿದರೂ ಅಸುಚಿಯೇ ಕಾಣುವಂತೆ ಜ್ಞಾನಿಗೆ ಕಾಣಲಾರವು. ಜನಗಳು ಒಂದೇಮನೆಯಲ್ಲಿ ಮಲಗಿದಾಗ್ಯೂ ಸ್ವಪ್ನದಲ್ಲಿ ಒಬ್ಬನುಕಂಡ ಆಡಂಬರವನ್ನು ಮತ್ತೊಬ್ಬನು ಕಾಣಲಾರನು. ಹ್ಯಾಗಂದರೇ ಮಗನೆಂಬ ಪ್ರೇಮದಿಂದಾಲಿಂಗಿಸಿದ ಮಾತೃವಂ ಪತ್ನಿ ಎಂದು ಭಾವಿಸಿದ ನೀಚನು ರತಿಯಿಂದಾಗತಕ್ಕ ಸುಖವ ನನುಭವಿಸುವನು. ಪ್ರಾಣಕಾಂತನೆಂಬನುರಾಗದಿಂದಾಲಿಂಗಿಸಿದ ಪತ್ನಿಯಂ ಮಹದೇವಿ ಎಂದು ಭಾವಿಸು

ವ ಜ್ಞಾನಿಯು ದೇವತಾಧ್ಯಾನ ಫಲವಂ ಅನುಭವಿಸುವನು. ಹೀಗೆ ಕಲ್ಪನಾಭೇದದಿಂದ ಭಾವಾಭಾವಗಳು ಮಡಿ ಮೈಲಿಗೆಗಳು ಶುಭಾಶುಭಗಳು ಸಹ ವ್ಯತ್ಯಸ್ತಗಳಾಗಿ ಉದಯಾಸ್ತಗಳನ್ನು ಹೊಂದುವವು. ತಂದಿ ತಾಯಿ ಮಗ ಈ ಮೂವರಲ್ಲಿ ಪ್ರತ್ಯಕ್ಷ ಕಾಣುವ ಅನುಭವೇನಂದರೆ; ಮಗನು ವಿಷ್ಟ ಮಾಡಿಕೊಂಡು ಹಸ್ತದಲ್ಲಿಡಿದಿರುವನು. ಇದನ್ನು ನೋಡಿ ತಂದೆಯು ತಾನು ಮುಟ್ಟಲಾರದೆ ಹೆಂಡತಿಗೆ ಮಗನ ವಿಷ್ಟಿಯನ್ನು ತೆಗದು ಸ್ವಚ್ಛ ಮಾಡೆಂದು ಹೇಳುವನು. ತಾಯಿಯು ಮನು ಕರದಿಂದ ಮಗನ ವಿಷ್ಟಯಂತೆಗದು ಸ್ವಚ್ಛ ಮಾಡಿದೆ ನಂಬುವಳು.. ಗಂಡನಲ್ಲಿರುವದು ದುರ್ಭಾವ ಹೆಂಡತಿಯಲ್ಲಿರುವದು. ಸದ್ಭಾವ ಮಗುವಿನಲ್ಲಿರುವದು. ಅಭಾವ ಮತ್ತು ನಾನು ಸ್ತ್ರೀಯರನ್ನು ನೋಡುವದಿಲ್ಲೆಂದು ಹೇಳುವರು. ಇವನು ದುರ್ಭಾವಿಯಾದ್ದರಿಂದ ಪರಮ ಘಾತಕನೆಂದು ಹೇಳಬೇಕು. ಏತಕ್ಕಂದರೇ ಹಿರಿಯರಂ ಮಾತ್ರುವೆಂದು ಕಿರಿಯರಂ ಪುತ್ರಿಯರೆಂದು ಸಮವಯಸ್ಕರಂ ಸಹೋದರರೆಂದು ಸದ್ಭಾವನೆಯಿಂದ ನೋಡುವನು. ಪರಮ ಜ್ಞಾನಿಯು ದುರ್ಭಾವನೆಯಿಂದ ನೋಡದೆ ಮುಟ್ಟದೆ ಇದ್ದರೂ ದುಷ್ಫಲವನ್ನು ಅನುಭವಿಸುವನು. ಸದ್ಭಾವನೆಯಿಂದ ನೋಡಿದರು, ಮುಟ್ಟಿದರೂ ಸತ್ಫಲವನ್ನೇ ಅನುಭವಿಸುವನು. ಮತ್ತು ನಾನೆಂಬುವದು ಯಲ್ಲಿರುವದೆಂದು ವಿಚಾರಿಸುವನು ಮುಕ್ತನಾಕುವನು ಯಾರು ತಿಳಿಯತಕ್ಕದ್ದಂ ತಿಳಿದು ದೇಶ ಕಾಲ ವಸ್ತು ಭೇದ ವಿಲ್ಲದೆ ಪರಿಪೂರ್ಣವಾಗಿರುವ ವಸ್ತುವಿನಲ್ಲಿ ವಿಶ್ರಾಂತಿಯಂ ಪಡಿಯುವನೋ ಅವನಿಗೆ ಲಾಭಾಲಾಭಗಳಲ್ಲಿ ವೈಷಮ್ಯಗಳು ಇಲ್ಲ. ಮನುಷ್ಯರು ದನಗಳನ್ನು ಪಶುಗಳೆಂದು ಹೇಳುವ

ರು ತಾವು ಪಶುಗಳೆಂಬುವದು ಗೊತ್ತೇಯಿಲ್ಲ. ಹ್ಯಾಗೆಂದರೇ ಅಹಂಕಾರ ಮಮಕಾರವೆಂಬ ಗೂಟಗಳನ್ನುನೆಟ್ಟು ಆಶ ರೋಷ ಮೋಸ ಈ ಮೂರು ಉರಿಗೂಡಿದ ಕರ್ಮ ಧರ್ಮಗಳೆಂಬ ಎರಡು ಪಾಶಗಳಿಂದ ಚಕ್ಷುಸ್ಸೆಂಬ ಎರಡು ಕಣ್ಣುಗಳಿಗೆ ಕಟ್ಟಿರುವನು. ಪರಮಾತ್ಮ, ಆದ್ದರಿಂದಲೇ ಇವನಿಗೆ ಪಶುಪತಿ ಎನ್ನುವರು. ಅಹಂಕಾರ ಮಮಕಾರವೆಂಬ ಗೂಟಗಳಂ ಕಿತ್ತೊಗೆದು ಕರ್ಮಧರ್ಮಗಳೆಂಬ ಪಾಶಗಳಂ ಹರಿದು ಮೇ, ಮೇ, ಮೇ, ಮೇ ಎಂಬುವ ಪಶುಭಾವವಂ ವಧಮಾಡಿ ಜ್ಞಾನಾಗ್ನಿಯಲ್ಲಿ ಆಹುತಿಯಂ ಕೊಟ್ಟು ನಂತರ ಉಳಿದದಕ್ಕೇನೆ ಶೇಷವೆಂತ ಹೆಸರು. ಶೇಷ ಪ್ರಸಾದವಂ ಸ್ವೀಕರಿಸಿ ಕೃತಕೃತ್ಯನಾಗಿ ತೃಪ್ತಿಯನ್ನೈದುವದೇ ಸಕ್ರಮವಾದ ಯಜ್ಞ ಹುಟ್ಟದ ಶಿಶುವಿಗೆ ಲಿಂಗ ಉದಕ ಈ ಎರಡು ವರ್ಣಗಳು ಬಂದವು.

(ನ) ಪೃಥ್ವಿ, ಕಲ್ಲು, ಘಟ, ಸದ್ಯೋಜಾತ ಮುಖ. (ಮ) ಅಪ್ಪು, ಕಮಲ ಹೃದಯ, ವಾಮದೇವಮುಖ. (ಶಿ) ಅಗ್ನಿ, ಜ್ಞಾನ ಜನ್ಮಪರಂಪರೆ, ಅಘೋರಮುಖ. (ವ) ವಾಯು ಚಲಿಸುವ ಮನಸೆಂಬ ಜಲಕಣವು ಘಟ್ಟಗೊಳ್ಳುವದು. ತತ್ಪುರುಷಮುಖ. (ಯ) ಆಕಾಶ, ಭಾವಾನುಸಾರವಾಗಿ ಕಾಣಿಸುಕೊಂಡು ಫಲವಾಗುವದು ಜ್ಞಾನ. (ಓಂ) ಪರಮೇಶ್ವರನ ಈ ಐದುಮುಖಗಳು ಘಳಿಗೆಯೊಳಗೆ ಏರಿ ಇಳಿಯುವ ವಿಷಯದಿಂ ಕೂಡಿದಾಗ್ಯು ನಿರ್ಮಲದಿಂದಿರುವ ಶುಭ್ರವಾದ ಪೂರ್ಣಚಂದ್ರನಂತೆಸೆವ ಮನವೆಂಬ ಚೇಳನ್ನು ಮತ್ತೊಂದು ಕಡೆಗೆ ಬಿಡದೆ ಶಾಶ್ವಿತವಾಗಿ ಹೃದಯಕಮಲದಲ್ಲಿರುವ ಜಂಗಮ ಲಿಂಗದಲ್ಲಿಯೆ ನಿಲ್ಲಿಸಿಕೊಂಡಿರುವನು. ಮರುಳಾರಾಧ್ಯನು ಕ್ಷಣಭಂಗುರವಾದ

ಪರುಳಾರಾಧ್ಯರು ಮಾಡುವ ಉಪದೇಶ.

ಸುಖದುಃಖಿಗಳಿಗೆ ಹರಿದಾಡುವ ಮನವೆಂಬಚೇಳನ್ನು ಹೃದಯ ಕಮಲದಲ್ಲಿ ನಿಲ್ಲಿಸಿ ಚಿತ್ತವಿಶ್ರಾಂತಿಯುಂಹೊಂದಿದ್ದಕ್ಕೆ ಉಜ್ಜಯಿನಿ ಸದ್ಧರ್ಮ ಸಿಂಹಾಸನದ ಮುಂಭಾಗದಲ್ಲಿರುವ ಮರುಳು ಸಿದ್ಧೇಶ್ವರ ದೇವಸ್ಥಾನದಲ್ಲಿರುವ ಕಮಲವನ್ನನೋಡಿದರೆ ವ್ಯಕ್ತವಾಗುವದು. ಕಲ್ಲಿನಲ್ಲಿ ಕಮಲವಿರುವದು. ಕಮಲದಲ್ಲಿ ಅನಂತ ಲಿಂಗಗಳಿರುವವು. ಈಲಿಂಗಗಳಲ್ಲಿ ದ್ವಾದಶಾಂಗುಲದ ವೃಶ್ಚಿಕವು ಮತ್ತೊಂದು ಕಡಿಗೆಹೋಗದೆ ಸ್ಥಿರವಾಗಿ ಅಲ್ಲಿಯೆ ನಿಂತಿರುವದು. ಈಗಲು ಪ್ರಸಿದ್ಧವೆ ಇರುತ್ತೆ. ಈಚೇಳು ಶುಕ್ಲಪಕ್ಷದಲ್ಲಿ ದರ್ಶನವಾದರೆ ಅನಿಷ್ಟ ನಾಶನವು. ಕೃಷ್ಣಪಕ್ಷದಲ್ಲಿ ದರ್ಶನವಾದರೆ ಅಸಂತೋಷವು. ವ್ಯವಹಾರ ದಶಯಲ್ಲಿ ದರ್ಶನ ವಾದರೆ ಅವರವರ ಭಾವಾನುಸಾರವಾಗಿ ಫಲಿವಂಕೊಡುವದು. ಪರಮಾರ್ಥ ದಶೆಯಲ್ಲಿ ದರ್ಶನವಾದರೆ ಇಚ್ಛಾಫಲವಾಗುವದು. ಅತಿದುಃಖಿಗೆ ಸುಖವು ಅತಿಭೋಗಿಗೆದುಃಖಪ್ರಾಪ್ತವಾಗುವದು. ಶಿವನು ಚಿಂಪಿಗನಾಗಿ ದೇಹಜೀವವ ಹೊಲಿದು ಮರ್ತ್ಯಲೋಕಕ್ಕೆ ಕಳುಹಿಸುವನು. ವಾಣಿಜ್ಯನಿಗೆ ದಂಡ ಅಂದರೆ ಧರ್ಮ. ದಂಡಿ ಅಂದರೆ ಧರ್ಮಿ. ಈ ದಂಡಿಗೆಯನ್ನ ಹಿಡಿದು ಸತ್ಯಾ ಅಸತ್ಯವಂ ತೂಗಿ ಫಲವಂ ಅನುವಿಸೆಂದು ಕಳುಹಿಸಿರುವನು. ಸತ್ಯಾಸತ್ಯವಂ ಸಮನಾಗಿಕಾಣುವನು. ಧರ್ಮಿಯು ಮತ್ತು ಮಹೇಶ್ವರನಿಗೆ ಉಪನಯನ ಕಾಲದಲ್ಲಿ ದಂಡ ಅಂದರೆ ಧರ್ಮವನ್ನು ಹಿಡಿದು ಆಚರಿಸಬೇಕೆಂದು ಅಸತ್ಯವಂ ತ್ಯಜಿಸಬೇಕೆಂದು ಹಸ್ತದಲ್ಲಿ ದಂಡವಂ ಕೊಟ್ಟಿರುವನು. ಧರ್ಮ ಅಂದರೇ ಪಾಪಕ್ಕೆ ದುಃಖವು. ಪುಣ್ಯಕ್ಕೆ ಸುಖವು. ಪಾಪಪುಣ್ಯಗಳನ್ನಂಟಿದೆ. ಸಾಕ್ಷಿಯಾಗಿರುವನಿಗೆ ನಿಜಾನಂದವು ಅದರದರ ಧರ್ಮವಾಗಿರುವ

ದು. ಸತ್ಯಾಸತ್ಯವೆಂದರೇನು ಅಂದರೆ ಭಂಗಾರದಲ್ಲಿ ಉಂಗುರವು ಕಲ್ಪಿತವಾಗಿ ಉಜ್ಜಿದರೆ ಭಂಗಾರದವುದಿ ಬೀಳುವವಲ್ಲದೆ ಉಂಗುರವು ಕಲ್ಪಿತವಾದ್ದರಿಂದ ಲಯವಾಯಿತು. ಇದರಂತೆ ಬ್ರಂಹಸತ್ತೆಯೇ ಪ್ರಪಂಚವಾಗಿದೆ. ಆದರೂ ಭಂಗಾರದಲ್ಲಿ ಉಂಗುರದಂತೆ ಬ್ರಹ್ಮಸತ್ತೆಯಲ್ಲಿ ಪ್ರಪಂಚವು ಅಸತ್ಯವಾಗಿರುವದು. ಇಂಥಾ ಅಸತ್ಯವಾಗಿರುವ ಜಗಭ್ರಾಂತಿಯನ್ನು ಬಿಟ್ಟು ಸತ್ಯವೆಂಬ ಧರ್ಮವೆಂದರೆ ಗಂಡವನ್ನು ಗುರುವು ಕೊಡುವನು. ಈ ವಿಷಯ ಯಾವಶಾಸ್ತ್ರದಲ್ಲಿರುವದೆಂದರೆ ಶಾಸ್ತ್ರವನ್ನು ಹರನುಡಿದನೋ ನರನುಡಿದನೋ ಹರನುಡಿದದ್ದನ್ನೇ ನರನುಡಿದಿರುವನು. ಅಂದರೆ ಕಂಡು ನುಡಿದ ಹರನುಡಿಯನ್ನು ಕೇಳಿ ನರನುಡಿದಿರುವನು. ಆದ್ದರಿಂದ ನರನುಡಿದದ್ದಕ್ಕೆ ಹರ ನುಡಿದದ್ದನ್ನು ಪ್ರಮಾಣವಾಗಿಟ್ಟುಕೊಳ್ಳಬೇಕಾಯಿತು. ಕಂಡು ನುಡಿದ ಹರ ನುಡಿಗೆ ಪ್ರಮಾಣವ್ಯಾಕೆ ಕಂಡು ನುಡಿದ ಮುದಿ ಸರಿಯು ಕೂಗನ್ನು ಕೇಳಿ ಮರಿಬೊಳ್ಳುಗಳು ಕೂಗುವವು. ಮುಟ್ಟಿದ್ದಕ್ಕೆ ಪ್ರಮಾಣ ಉಂಟು. ಕೇಳಿದ್ದಕ್ಕೆ ಪ್ರಮಾಣ ಉಂಟು. ನೋಡಿದ್ದಕ್ಕೆ ಪ್ರಮಾಣ ಉಂಟೇ ಇಲ್ಲ. "ಯೋಗಾದ್ರೂಢಿರ್ಬಲೀಯಸಿ" ಎಂಬ ನ್ಯಾಯಕ್ಕನುಸಾರವಾಗಿ ಶಾಸ್ತ್ರಕ್ಕಿಂತಲು ರೂಢಿಯೇ ಶ್ರೇಷ್ಠ. ಬಲವಾದ್ದು ಇನ್ನು ಶಬ್ದದಾಶೆಯಿಂದ ಚಿಗುರಿ ಕೆಡುವದು. ಸ್ಪರ್ಶದಾಶೆಯಿಂದ ಗಜವು ಕೆಡುವದು. ರೂಪಿನಾಶೆಯಿಂದ ಪತಂಗ ಕೆಡುವದು. ಗಂಧದಾಶೆಯಿಂದ ಭ್ರಮರ ಕೆಡುವದು. ರುಚಿಯಾಶೆಯಿಂದ ಮತ್ಸ್ಯ ಕೆಡುವದು. ಒಂದೊಂದು ವಿಷಯದಿಂದಲೇ ಪ್ರಾಣಿಗಳು ಕೆಟ್ಟುಹೋಗುವಲ್ಲಿ ಪಂಚಮ ವಿಷಯಗಳಿಂ ಕೂಡಿದ ಮನವೆಂಬ ಕೊಳ್ಳಿಯಿಂ ತಿರುವಿದರೆ ಚ

ಕಾರ್ರಕಾರವಾಗಿ ಕಂಡು ಆ ಚಕ್ರದಲ್ಲಿ ಬಿದ್ದು ಉಳಿದಿರುವರಂತಾ ಸುಳ್ಳೆ ಸುಳ್ಳು ಸ್ತುತಿನಿಂದೆ ಚಕ್ರವೆಂದು, ಶೀತೋಷ್ಣ ಚಕ್ರವೆಂದು, ಕುರೂಪಿ ಸ್ಫುರದ್ರೂಪಿ ವಕ್ರವೆಂದು, ವಿಷಮೃತ ಚಕ್ರವೆಂದು, ಸುಗಂಧ ದುರ್ಗಂಧ ಚಕ್ರವೆಂದು, ಈ ಐದು ಚಕ್ರಗಳಲ್ಲಿ ಬೀಳದಿರುವವನೆ ಶಿಭಾನುಭಾವಿ.

(ಪ್ರ. ತೃ. ೮ ನೆ ಅಧಿಕರಣ.)

## ಬ್ರಹ್ಮ ಕಪಾಲವೆಂ ಯಾತಕ್ಕೆ ಕೊಡುತ್ತಾರೆ.

ತಾಂಬ್ರದ ತಗಡಿನಿಂದ ಮಾಡಿದ ಬ್ರಹ್ಮ ಕಪಾಲ ವೆಂತ ಯಾತಕ್ಕೆ ಕೊಡುತ್ತಾರೆ. ಸಮಾಧಾನ ಈ ಮುಂಜ ಅಹಂಕಾರಕ್ಕೆ ತಾಂಬ್ರನೆಂದು ಹೇಳಲ್ಪಟ್ಟಿರುವದಷ್ಟೆ ವೃತ್ತಿಗಳಲ್ಲಿ ಭಿಕ್ಷಾವೃತ್ತಿಯು ಬಹಳ ಹೀನವುಳ್ಳದ್ದು. ಈ ಭಿಕ್ಷಾವೃತ್ತಿಯಿಂದ ಅಹಂಕಾರವು ಕೆಟ್ಟು ನಿರಹಂಕಾರವು ನೆಲೆಗೊಳ್ಳುವದಾದ್ದರಿಂದ ಅಹಂಕಾರವ ಬಿಡಿಸುವದಕ್ಕಾಗಿಯೇ ತಾಂಬ್ರದ ಕಪಾಲವಂ ತೆಗದುಕೊಂಡು ಭಿಕ್ಷಾವೃತ್ತಿಯಂ ಮಾಡುಯೆಂದು ಕೊಡುವರು. ಇದು ಒಂದು ಸೌಜ್ಞೆ. ಈ ತಾಂಬ್ರವು ಎಷ್ಟುಸಾರಿ ಕರಗಿಸಿ ಶುದ್ಧಿಮಾಡಬೇಕೆಂದು ಪ್ರಯತ್ನಿಸಿದರು ತನ್ನ ಸಹಜಗುಣವಾದ ಕಿಲುಬೇ ಮೇಲು ಬರುವದು. ಆದ್ದರಿಂದ ಸದ್ಗುರುವನ್ನು ಹೊಂದಿದಲ್ಲಿ ಪರುಷ ಸೋಂಕಿದ ಲೋಹದಂತಾಗುವನು.

## ಉಪದೇಶದ ಅರ್ಥವೇನು ?

ಮುಷ್ಕೃತ್ಯಗಳಂ ಮಾಡಿದವರನ್ನ ಮಹಾರಾಜರು ಸ್ವದೇಶವನ್ನು ಬಿಡಿಸಿ ಮತ್ತೊಂದು ದೇಶಕ್ಕೆ ಕಳುಹಿಸುವರು. ಆದರಂತೆ ಪಾಪಕ್ರಿಯೆಗಳನ್ನು ತ್ಯಜಿಸುವಂತೆಮಾಡಿ ಪರಮಾರ್ಥ

ಜ್ಞಾನವಂ ಬೋಧಿಸಿ ಪರಲೋಕವೆಂಬ ಪುಣ್ಯಲೋಕಕ್ಕೆ ಸದ್ಗುರುವು ಕಳುಹಿಸುವನು. ಅದು ಹ್ಯಾಗಂದರೆ ಅಭಿಮಾನವೆಂಬ ಅಹಂಕಾರವು ಬಹಳ ಕೆಟ್ಟದು. ಇದು ಯಾಚನೆಯಿಂದಲ್ಲದೆ ಮತ್ತ್ಯಾತರಿಂದಲೂ ಕೆಡದು ಯೆಂಬೋದಾಗಿ ತಿಳ್ಸಿ ವಾಮ ಹಸ್ತದಲ್ಲಿ ಪಂಚಾಕ್ಷರಿಯೇ ಪಂಚಕೋಶವೆಂಬ ಜೋಳಿಗೆಯನ್ನ ಧಾರಣಮಾಡಿ ಹೀನವೃತ್ತಿಯಾದ ಭಿಕ್ಷಾವರ್ತಿಯಂ ಕೈಕೊಂಡು ಪಂಚಕೋಶಾತೀತನಾದ ಷಡಾಕ್ಷರಿಯೇ ಸಾಕ್ಷಿಭೂತವಾಗಿರುವ ದಂಡ ಅಂದರೆ ಸದ್ಧರ್ಮವನ್ನ ಹಿಡಿದು ಆಚರಿಸುವದೇ ಸತ್ಯಲೋಕ ಯಂದು ದಕ್ಷಿಣ ಹಸ್ತದಲ್ಲಿ ದಂಡವನ್ನ ಮತ್ತು ದಕ್ಷಿಣ ಶ್ರೋತ್ರದಲ್ಲಿ ಷಡಾಕ್ಷರಿಯನ್ನ ಮತ್ತು ವಾಮಹಸ್ತದಲ್ಲಿ ಜೋಳಿಗಿಯನ್ನ ವಾಮಶ್ರೋತ್ರದಲ್ಲಿ ಪಂಚಾಕ್ಷರಿಯನ್ನ ಕಾಲಕಾಮ ಕರ್ಮ ಇವುಗಳಂ ಸುಟ್ಟ ಭಸ್ಮವನ್ನು ಮೂರು ರೇಖಗಳಾಗಿ ಧರಿಸಿ ಉಪದೇಶವಂ ಕೊಡುವರು. ಇಂಥಾ ಸತ್ಯಲೋಕವು ಪ್ರಾಪ್ತವಾಗುವದಂ ಬಿಟ್ಟು ಗುರುಗಳು ದಂಡವನ್ನ ಮತ್ತು ಜೋಳಿಗೆಯನ್ನ ಕೊಟ್ಟಿರುವರು. ದಂಡದಿಂದ ಕೊಡದೆ ಇರುವವರನ್ನ ದಂಡಿಸುವದಕ್ಕೆ ಮಾಡಿಕೊಂಡು ಜೋಳಿಗೆಯಿಂದ ಭಿಕ್ಷಾ ಬೇಡಿ ತಮ್ಮ ಭವದ ಸಂಸಾರಕ್ಕೆ ಮಡಿದು ನೌಕರಿಯಾಗಿ ದೇಹಾಭಿಮಾನವಂ ತ್ಯಜಿಸದೆ ಚಿತ್ತಗುಣ ವಳಿಯದೆ ಮಹೇಶ್ವರ ನಾಗದೆ ಬಾಲಕರು ಕಾಲು ಸಂದಿನ ಕೋಲನ್ನು ಕುದುರೆ ಯಂದು ಲೀಲೆಯಿಂದಾಡಿ ದಣದಂತೆ ಸತ್ಯಲೋಕವಂ ಬಿಟ್ಟು ಮೃತ್ಯುಲೋಕಕ್ಕೆ ಹೋಗುವರು. ಬಾಲಕರು ತಮ್ಮಮೃತ್ಯಕ್ಕೆ ತಾವು ಬಿದ್ದು ದುಃಖವಂ ಸ್ಮರಿಸುವಂತೆ ಅಜ್ಞಾನಿಗಳು ಪ್ರಪಂಚದಲ್ಲಿ ಬಿದ್ದುದರಿಂದ ದುಃಖವಂ ಸ್ಮರಿಸಿಕೊಳ್ಳಬೇಕಾಯಿತು.

ಪ್ರ. ಪ್ರ. ೧೦ ನೆ ಅಧಿಕರಣ.

## ಉಪನಯನದ ಅರ್ಥವೇನು ಅಂದರೆ

ಉಪನಯನ ಅಂದರೆ ಸಮೀಪದಲ್ಲಿರುವ ನಯನ ಅಂದರೆ ಈ ಚಕ್ಷುಗಳ ಮಧ್ಯದಲ್ಲಿರುವ ಜ್ಞಾನ ಚಕ್ಷುವು ಆಲೋಚಿಸಿ ನೋಡಿರಿಯೆಂದು ಪ್ರತಿಯೊಬ್ಬರು ಹೇಳುವರು. ಆಲೋಚನೆ ಅಂದರೆ ಲೋಚನೆಗೆ ಚಕ್ಷುವೆಂತ ಹೆಸರು ಆಲೋಚನಿಗೆ ಜ್ಞಾನಚಕ್ಷುವೆಂತ ಹೆಸರಾಗಿರುವದು. ಉಪನಯನವಂ ಕೊಡುವಿಕೆ ಅಂದರೆ ಸರ್ವಸಮತ್ವದ ಜ್ಞಾನ ಚಕ್ಷುವಂ ತೋರಿಸಿ ಕೊಡುವಿಕೆಗೆ ಹೆಸರು.

## ಚತುಃಕರಣಗಳಿಗೆ ಲೋಹವಂ ಕಲ್ಪಿಸುವಿಕೆ.

ಮನಸು ತವರ, ಬುದ್ಧಿ ಕಂಚು, ಅಹಂಕಾರ ತಾಂಬ್ರ, ಚಿತ್ತ ಹಿತ್ತಾಳಿ. ಮಲಹರದ ಚಿಕ್ಕದೇವಣ್ಣನು ಇವುಗಳಂ ತನ್ನಿನಿಮಗೆ ಬೇಕಾದ ವಡವೆಯಂ ಮಾಡಿಕೊಡುವೆಯಂದು ಹೇಳಿರುವನು. ಯಾತಕ್ಕಂದರೇ- ತವರವು ಊಷ್ಣಕ್ಕೆ ಜಾಗ್ರತೆ ಕರಗುವದು. ಈ ಮನಸ್ಸು ಸ್ತುತಿನಿಂದ್ಯಗಳಿಗೆ ಜಾಗ್ರತೆ ಕರಗುವದು. ಹೆಣ್ಣುಮಕ್ಕಳಿಗೆ ತವರಮನಿಯು ಹ್ಯಾಗೋ ಹಾಗೆ ಸ್ತುತಿನಿಂದ್ಯಗಳಿಗೆ ಮನಸ್ಸು ತವರ ಮನಿಯಂ ಮಾಡಿಕೊಂಡಿರುವದು. ಮತ್ತು ಹೆಣ್ಣುಮಕ್ಕಳಿಗೆ ಗಂಡನಿಂದ ತಾಳಿಯನ್ನು ಧರಿಸಿ ತವರು ಮನಿಯನ್ನು ಬಿಡಿಸಿ ಗಂಡನಲ್ಲಿ ಏಕತ್ವವಂ ಮಾತಾಪಿತೃಗಳು ಮಾಡುತ್ತಾರೆ ಹಾಗೆ ಸ್ತುತಿನಿಂದ್ಯಗಳಿಗೆ ತವರುಮನೆಯಾಗಿರುವ ಮನಸ್ಸಿಗೆ ಪತಿಯಾದ ಆತ್ಮನಿಂದ ಚಿತ್ತಚಿನ್ಮಯವೆಂಬ ತಾಳಿಯನ್ನು ಧರಿಸಿ ಮನಸ್ಸಿಗೆ ತವರಮನೆಯಾಗಿರುವ ಸ್ತುತಿನಿಂದ್ಯಗಳನ್ನ ಬಿಡಿಸಿ ಆತ್ಮನಲ್ಲಿ ಯೇಕತ್ವವನ್ನು ಮಾಡಿಸು

ತ್ತಾರೆ. ತಾಳಿಗೆ ಹಿತ್ತಾಳಿಯುಂತ ಅನ್ನುವ ದ್ಯಾತಕ್ಕೆ ಅಂದರೆ (ಹಿ) ಅನ್ನುವದು ಅತ್ಯಂತ ಹಿತಕರವಾದದ್ದು. ಆದ್ದರಿಂದ ಹಿ ತ್ತಾಳಿಯುಂತ ಹೆಸರಾಯಿತು. ಚಿತ್ತವು ಸಾಕ್ಷಾದ್ದೀಶ್ವರ ಮೂ ರ್ತಿಯಾದ್ದರಿಂದ ಸದಾ ಹೃದಯ ಕಮಲದಲ್ಲಿ ಧರಿಸಬೇಕೆಂತ ಆಯಿತು. ಈ ಮನಸ್ಸಿನ ಮಲಿನವಂ ತೊಳದು ಸುಮನಸ್ಸನ್ನು ಮಾಡಿ ಮತ್ತು ಚಿತ್ತ ಚಾಂಚಲ್ಯದ ಕೆಟ್ಟಕಿಲುಬಂ ಕಳದು ಶು ದ್ಧ ಚಿನ್ನವಂನಾಗಿಮಾಡಿ ಆಚಿನ್ಮಯನನ್ನೇ ಯಾವಾಗಲೂಧರಿಸ ಬೇಕೆಂದು ಮತ್ತು ಬುದ್ಧಿಯ ಅನಿಶ್ಚಯವಂ ಕೆಡಿಸಿ ಸಹಜವ ನ್ನಾಗಿ ಮಾಡಿ ಮತ್ತು ಅಹಂಕಾರದ ಕಠತ್ವವಂ ಕಳದು ಮೃದು ತ್ವವಂ ಮಾಡಿಕೊಡುವನಾದ್ದರಿಂದ ಅವನಿಗೆ ಮಲಹರದ ಚಿಕ್ಕ ದೇವಣ್ಣನೆಂದು ಹೆಸರಾಯಿತು. ಮನಸ್ಸನ್ನು ದೃಢೀಕರಿಸಿ ಸು ಚಿತ್ತವೆಂಬ ಈಶ್ವರನನ್ನ ಹೃದಯ ಕಮಲದಲ್ಲಿ ಧರಿಸಿದಾತನೆ ಶಿ ವ ಭಕ್ತನು. ಸ್ತುತಿನಿಂದ್ಯಗಳಿಗೆ ಹಿಗ್ಗದೆ ತಗ್ಗದಿರುವನೇ ದೇವ ರ ದೇವನು.

## ೧-ನೆ ಭಕ್ತಸ್ಥಲ.

ನನ್ನ ಪದಾರ್ಥವೆಂದು ದಾನವಂಕೊಟ್ಟರೆ ಭಕ್ತಿ ಸ್ಥಲಕ್ಕೆ ಕೇಡು ಬರುವದು. ಇಕ್ಕದಮಾರ ಕೊಡದ ಮಾರಿಯು ಅಹಂ ಕಾರ ಗುಣವಳಿದುದರಿಂದ ಯಾವಕಾಲದಲ್ಲಿ ಯಾವದನ್ನು ಕೇಳಿ ದರು ಕೊಡದೆ ಯಲ್ಲಾ ತೆಗದುಕೊಂಡಾಗ್ಯೂ ಸುಮ್ಮನೇ ಸ ತ್ತಂತಿರುವದೇ ಸಾಕ್ಷಿ. ಮತ್ತು ದೇಹಾಭಿಮಾನವಂ ತ್ಯಜಿಸಿರು ವದರಿಂದ ದೇಹವನ್ನು ಸುಟ್ಟರೂ ದುಃಕವಾಗದಿರುವದೆ ಸಾಕ್ಷಿ.

೨-ನೇ ಮಹೇಶ್ವರ ಸ್ಥಲ.

ದೇಹಿಯೆಂದು ಉದರಪೋಷಣೆಯಂ ಮಾಡಿದರೆ ಮಹೇಶ್ವರ ಸ್ಥಲಕ್ಕೆ ಕೇಡುಬರುವದು. ಗಣಪತಿಯು ತನ್ನಂ ಗುರತು ಹಿಗುಳಿಯುನ್ನೇ ಬಯಸಿದಂತೆ.

೩-ನೇ ಪ್ರಸಾದಿಸ್ಥಲ.

ರೂಪು ರುಚಿ ತೃಪ್ತಿಯಲ್ಲಿ ಅಸಹ್ಯಭಾವ ಮಾಡಿದರೆ ಪ್ರಸಾದಿ ಯಾಗಲಿಲ್ಲ. ಯುಗಾದಿ ಪಾಡ್ಯದದಿನವೆ ವಿಷವಮೃತ ಶತ್ರು ಮಿತ್ರ ಸುಖ ದುಃಖ ಸಮಾನವಾಗಿ ತಿಳಿಯುವ ಗುರ್ತಿಗಾಗಿಯೆ ಬೇವು ಬೆಲ್ಲವಂ ಸ್ವೀಕರಿಸುವರು. ಈ ಜ್ಞಾನವಂ ಬಿಟ್ಟು ಒಬ್ಬರ ತಲೆ ಒಬ್ಬರ ಕೈಯೊಳಗೊಂಬಡಾಗಿ ಚಂಡಾಡುವರು. ಮನಸ್ಸಿಗೆ ಚಂದ್ರ ಅಧಿದೇವತೆಯಾದ್ದರಿಂದ ತಮ್ಮ ಅಧಿದೇವತೆಯಲ್ಲಿ ಮನಸ್ಸನ್ನು ಐಕ್ಯಗೊಳಿಸಬೇಕು.

೪-ನೇ ಪ್ರಾಣಲಿಂಗಿ ಸ್ಥಲ.

ಮನಸ್ಸನ್ನು ಬಹಿರ್ಗತ ಮಾಡಿದರೆ ಪ್ರಾಣಲಿಂಗಿ ಸ್ಥಲವಲ್ಲ.

೫-ನೇ ಶರಣಸ್ಥಲ.

ದೃಶ್ಯ ಪದಾರ್ಥವೆಲ್ಲ ಶಿವಲಿಂಗವೆನ್ನದಿದ್ದರೆ ಶರಣಸ್ಥಲವಲ್ಲ.

೬-ನೇ ಐಕ್ಯ ಸ್ಥಲ.

ಪೂಜ್ಯ ಪೂಜಕರೆಂದಲ್ಲಿ ಐಕ್ಯಸ್ಥಲವಲ್ಲ.

ನಿರಹಂಕಾರಿಯೇ ಭಕ್ತ, ನಿರಾಶಿಯೇ ಮಹೇಶ, ಸುಖದುಃಖವಳಿದ ನಿಶ್ಚಯಬುದ್ಧಿಯೇ ಪ್ರಸಾದಿ ವಿಷಯಗಳಿ ಗರಿದಾಡುವ ಮನಸ್ಸನ್ನು ಅಂತರ್ಮುಖ ಮಾಡುವದೇ ಪ್ರಾಣಲಿಂಗಿ ಸ್ಥಲ. ಜೀವಗುಣ ವಳಿದುದೇ ಶರಣಸ್ಥಲ. ಜ್ಞಾನಾಜ್ಞಾನಂಗಳಂ ಕಳೆದುಳಿದುದೇ ಐಕ್ಯಸ್ಥಲ.

ಹಸ್ತದಲ್ಲಿ ಇಷ್ಟಲಿಂಗವನ್ನಿಟ್ಟುಕೊಂಡು ಪೂಜಿಸುವ ವಿಧಾನ.







ಶಿರಸ್ಸನ್ನು ಬಲಕ್ಕೆ ಬಾಗಿಸಿ ದಕ್ಷಿಣಾಮೂರ್ತಿಯನ್ನು ನಿರೀಕ್ಷಿಸಬೇಕು. ಚಂದ್ರಸ್ವರದಲ್ಲಿ.

ಪೂರ್ವ ಮುಖವಾಗಿ ಪಶ್ಚಿಮಕ್ಕೆ ನಿಂತುಕೊಂಡು ದಕ್ಷಿಣಾಮೂರ್ತಿಯನ್ನ ಪೂಜಿಸಬೇಕೆಂತ ಚಿಕ್ಕಣ್ಣಾಚಾರಿಯು ದೇವಾಲಯವನ್ನ ಕಟ್ಟಿರುವದಂ ನೋಡಿದರೆ ನಿಂತುಕೊಂಡು ಪೂಜಿಸುವದಕ್ಕಾಗಿಯೇ ಪಶ್ಚಿಮದಿಕ್ಕಿಗೆ ಅರೆಗಳನ್ನು ಇಡದೆ ಉತ್ತರ ಪೂರ್ವದಿಕ್ಕಿಗೆ ಅರೆಗಳನ್ನು ಇಟ್ಟು ಇರುತ್ತಾನೆ. ಲಿಂಗದ ಉತ್ತರ ದಿಕ್ಕಿಗೆ ದ್ವಾರವನ್ನ ಮಾಡಿರುತ್ತಾನೆ. ಈತನು ಅತ್ಯಂತ ಘಟಶೋಧನೆಯಂ ಮಾಡಿದಾತನು. ಈತನಿಗೆ ಮರುಳು ಶಿದ್ಧಾ

ಚಾರ್ಯನು ಷಟ್ಚಕ್ರಗಳನ್ನ ಬೋಧಿಸಿ ಇಷ್ಟಲಿಂಗದ ನಿರ್ಣಯವಂ ತೋರಿಸಿ ಕೊಟ್ಟಿರುತ್ತಾನೆ. ಆದ್ದರಿಂದ ಗುರುವಾದ ಮರುಳು ಶಿದ್ಧಾಚಾರ್ಯನ ಸಮ್ಮುಖದಲ್ಲಿಯೇ ಜಕ್ಕಣಾಚಾರಿಯಾದ ಶಿಷ್ಯನು ತನ್ನ ಹಸ್ತದಲ್ಲಿ ಇಷ್ಟಲಿಂಗವನ್ನು ಇಟ್ಟುಕೊಂಡಂತೆ ಉಜ್ಜನಿ ಸದ್ಧರ್ಮ ಸಿಂಹಾಸನದ ದೇವಸ್ಥಾನದಲ್ಲಿ ವಿಗ್ರಹವಂ ತೋರಿಸಿದ್ದಾನೆ. ತ್ವಷ್ಟಾಚಾರಿ ಮಾಯಾಚಾರಿ ಸ್ವರ್ಣಾಚಾರಿ ಶಿಲ್ಪಾಚಾರಿ ಇವರೇ ಮುಂತಾದವರು ಈಗಲು ಈತನ ವಿಗ್ರಹವನ್ನು ಪೂಜಿಸುವರು. ನಾರುದ್ರೋ ರುದ್ರಮರ್ಚಯೇತ್ ||

ಶಮೀಪತ್ರಿಯನ್ನು ಧರಿಸುವಿಕೆ.

"ಶಮೀಶಮೀ ಯತೇಪಾಪಂ ಶಮೀಶತ್ರು ವಿನಾಶನಂ| ಅರ್ಜುನಸ್ಯ ಧನುರ್ಧಾರಿ ಶಂಕರ ಪ್ರಿಯದರ್ಶನಂ" ಎಂದು ಮಂತ್ರವಿರುವದು. ಇಷ್ಟಲಿಂಗಕ್ಕೆ ಶಮೀಪತ್ರಿಯಂ ಧರಿಸಿದರೆ ಶತ್ರುನಾಶನವೆಂದು ಹೇಳುತ್ತಾರಲ್ಲಾ ಹಾಗಾದ ಬಳಿಕ ಶಮೀವೃಕ್ಷಗಳು ಅನೇಕವಾಗಿರುವವು. ಅವುಗಳನ್ನೆಲ್ಲಾ ಧರಿಸಿ ತಮ್ಮ ತಮ್ಮ ಶತೃಗಳಂ ಕಳಕೊಳ್ಳಬಹುದಲ್ಲಾ ಅಂದರೆ ಶಮೆ ದಮ ಶಾಂತಿ ಸೈರಣೆ ತಿಥಿಕ್ಷೆ ಶ್ರದ್ಧೆ ಇವೇ ಮುಂತಾದ ಗುಣಗಳಂ ಧರಿಸಬೇಕು. ಹಾಗಾದರೆ ಶತೃಗಳು ಯೇನೂ ಮಾಡಲರಿಯರು ಅರ್ಜುನಾದಿಗಳು ಅರಣ್ಯವಾಸವಂ ಮಾಡುವಕಾಲದಲ್ಲಿ ತಮ್ಮ ತಮ್ಮ ಆಯುಧಗಳನ್ನು ಈ ಶಮಾದಿ ಗುಣಗಳಿಗೆ ಕೊಟ್ಟುಬಿಟ್ಟರು. ಶಮೀ ವೃಕ್ಷವು ಅಷ್ಟುಧನುಸ್ಸುಗಳನ್ನು ಹೋರಲಿಕ್ಕೆ ಸಾಧ್ಯವೇ ಅಲ್ಲಾ ಮತ್ತು ಜಡವಾದ ವೃಕ್ಷವು ಈ ಧನಸ್ಸುಗಳಂ ಯಾರಿಗೂ ಕೊಡಕೂಡದೆಂದು ಹೇಳಿದರೆ ಕೇಳುವದೆ ಸಾಧನಿ

ಗೋಸ್ಕರ ಈ ಶಮಿವೃಕ್ಷವನ್ನ ತೋರಿಸಿರುತ್ತೆ. ಶಮಾದಿಗುಣ ಗಳು ಇದ್ದವರನ್ನ ಈಶ್ವರನು ಅತ್ಯಂತ ಪ್ರೀತಿಯುಳ್ಳವನಾಗಿ ಕಾಣುತ್ತಾನೆ. ಶಿಷ್ಯನ ಕೈಗೆ ಆಯುಧವನ್ನು ಕೊಟ್ಟರೆ ವರರಿಗೆ ಓಂಸಿಮಾಡುವದು. ಆದ್ದರಿಂದ ಶಿಷ್ಯನಕೈಲಿ ಬುದ್ಧಿಯಂಕೊಡ ಬ್ಯಾಡವೆಂದು ವಾಡಿಕೆಇರುವದು. ಚೈತನ್ಯನಿಗೆ ಸಮಾಧಾನವು ಶ್ರೇಷ್ಟವಾದ ವಜ್ರಾಂಗಿಯು ಜಯಶೀಲನಾದ ಹತ್ತನೆಯ ಪು ರುಷನು ನಾನೇ ಇರುವೆನೆಂಬ ಸಮಾಧಾನವಂ ಧರಿಸುವ ಗುರ್ತಿ ಗೆ ಈಗಲು ವಿಜಯ ದಶಿಮಿ ಬನ್ನಿಮುಡಿಯುವ ವಾಡಿಕೆ ಇರು ತ್ತೆ. ಕರ್ಮವು ಜ್ಞಾನೋತ್ಪತ್ತಿ ಹೇತು ವುಳ್ಳದ್ದು.

ತೈ, ಚ, ೧, ೨, ೩, ೪, ೫, ೬ ನೇ ಅಧಿಕರಣ.

## ಜ್ಞಾನಪಾದೋದಕ ವಿಧಾಯಕ.

ಬುದ್ಧಿಯೆಂಬ ಬಟ್ಟಲವನ್ನು ಚಿತ್ತವೆಂಬ ಈಶ್ವರನ ಪಾ ದದಲ್ಲಿಟ್ಟು ಮನಸ್ಸೆಂಬ ಉದಕವನ್ನೆರದು ನಾನೆಂಬ ಅಹಂಕಾರ ಉಳ್ಳವನು ಸ್ವೀಕರಿಸಿದ ಮಾತ್ರಕ್ಕೆ ಉರಿಕರ್ಮವಾದಂತೆ ನಾ ನೆಂಬ ಅಹಂಕಾರವಳಿದು ತಾನೆತಾನೆಂಬ ಅಹಂಕಾರ ಉಳಿಯು ವದು.

## ಯೋ ಗ ಲ ಕ್ಷ ಣ.

ಯೋಗ ಅಂದರೆಯೇನು? ಯೋಗಕ್ಕೆ ಚಿತ್ತವೃತ್ತಿ ನಿರೋಧ ಚಪಲಚಿತ್ತನಾದ ಕರ್ಮಖಾಂಡಿಯು ಕನ್ನಡಿಯೊಳಗೆ ತನ್ನರೂ ಪು ಕಾಣುವಂತೆ ನೇತ್ರದ ಕರೀ ಗುಡ್ಡೆಯಲ್ಲಿ ಕಾಣಬರುವ ಪ್ರ ತಿಬಿಂಬವು ನಾಶಿಕಾಗ್ರದಲ್ಲಿ ಅನಿಮಿಷ ದ್ರಿಷ್ಟಿಯನ್ನಿಟ್ಟು ನೋ ಡಿದರೆ ಕೆಲವುದಿನ ಅಂದರೆ ತೊಂಬತ್ತು ದಿನಕ್ಕೆ ಅರುವೆ ಬೀಜ ದಷ್ಟು ಕಪ್ಪಾಗಿ ಕಾಣುತ್ತೆ. ಆ ಕಪ್ಪಿನೊಳಗೆ ತನ್ನ ಪ್ರತಿಬಿಂಬ

ದ ಪ್ರತಿಬಿಂಬವು ಕಾಣುವದು. ತನ್ನ ರೂಪವನ್ನು ನೋಡಿಕೊಳ್ಳುವದಕ್ಕೆ ಇಷ್ಟು ಶ್ರಮಪಡುವ ಅವಶ್ಯಕವಿಲ್ಲ. ಕನ್ನಡಿಯನ್ನಿಟ್ಟು ನೋಡಿಕೊಂಡರೆ ಸ್ವಸ್ವರೂಪವು ಕಾಣುವದು. ಚಿತ್ರಪಟವನ್ನ ನೋಡುವದು ಜಡವಾದ ಪ್ರತಿಬಿಂಬದ ಪ್ರತಿಬಿಂಬವಂ ನೋಡುವನು ವ್ರೊಂದೆ. ಇದು ಸ್ವಸ್ವರೂಪಜ್ಞಾನವಲ್ಲ. ಕನ್ನಡಿಯನ್ನು ಒಂದು ಗುಬ್ಬಿಯುನೋಡಿ ತನ್ನಂತೆ ಮತ್ತೊಂದು ಗುಬ್ಬಿಯು ಕಾಣುವದಲ್ಲ ಯೆಂದು ಕೀಚು ಕೀಚು ಎಂದು ಅರಚಿ ಬಳಲಿ ಕಡಿಗೆ ಯೇನೊಂದು ಫಲವು ತೋರದೆ ನಾಚಿಕೊಂಡು ಸುಮ್ಮನೆ ವ್ಯಸನಪಟ್ಟು ಸಾಯುವಂತೆ ಜಡವಾದ ಪ್ರತಿಬಿಂಬದ ಪ್ರತಿಬಿಂಬವನ್ನು ನೋಡುವದು ಯೋಗವಲ್ಲ ಯಾತಕ್ಕಂದರೇ ಜಡದರುಶನದಿಂದಾನಂದ ಪಡುವದು. ತೀರಿಹೋದ ಬಂಧು ವರ್ಗದವರ ಭಾವಚಿತ್ರ ಪಟವನ್ನು ನೋಡಿ ಕ್ಷಣಕಾಲ ಆನಂದ ಪಟ್ಟು ಅನಂತರ ದುಃಖ ದರುಶನ ವಾದಂತೆ ಈ ಜಡಬಿಂಬ ದರುಶನದಿಂದ ಸ್ವಲ್ಪಕಾಲ ಆನಂದಪಟ್ಟು ಪುನಹ ಅಜಡನಾದ ಸರ್ವ ವ್ಯಾಪಕನಾದ ನಿರಂಜನ ನಿರ್ಗುಣ ನಿರಾವರಣ ನಿರಾಕಾರ ನಿರ್ಮಾಯನಾದ ಶಿವನೆಂಬ ದಕ್ಷಿಣಾಮೂರ್ತಿಯ ಸ್ವರೂಪವನ್ನು ಕಾಣದೆ ಹೋದೆನಲ್ಲ ಯೆಂದು ದುಃಖಪಡುವನು. ಹೀಗೆ ದುಃಖಿಸುವದು ಶಿವಯೋಗವಲ್ಲ. ಸುಹೃದಾಪ್ತವಾಕ್ಯವಂಕೇಳಿ ಸ್ವಚ್ಛಾಸ್ತ್ರಮಂನೋಡಿ ಸದ್ಗುರು ಸೇವೆಯನ್ನು ಮಾಡುವ ಚತುಸ್ಸಾಧನ ಸಂಪನ್ನತೆಯಿಂದಿರುವನಿಗಲ್ಲದೇ ಮತ್ತಾರಿಗು ನಿರಂಜನವಸ್ತುವಂ ಕಾಣುವದು. ಸಾಧ್ಯವಲ್ಲ.

ಬ್ರ॥ ಸೂ॥ ಪ್ರಥಮಾಧ್ಯಾಯ ಪ್ರ॥ ಪಾದ ೧ನೆ ಅ. ನೋಡು॥

ಭವನದಕೂಪವಂ ಮುಚ್ಚುವದರಿಂದ ಕೌಪೀನವೆಂದು ಹೆಸರಾಗಿರುವದು. ಭವದಕೂಪವು ಮುಚ್ಚುವ ಇಚ್ಛೆಯು ದೃಢವಾಗಿಯು ನಿಲ್ಲುವದಕ್ಕೆ ಅಂತುವಿನಿಂದಲ್ಲದೆ ಮತ್ತ್ಯಾತರಿಂದಲೂ ಸಾಧ್ಯವಾಗದು. ಅಂತು ಯೆಂದರೆ ಅಷ್ಟತ್ತೇಳು ಲಿಂಗಸ್ಥಲ ನಾಲ್ವತ್ತು ನಾಲ್ಕು ಅಂಗಸ್ಥಲ ಕೂಡಿದರೆ ೧೦೧ ಆಗುವದು. ಮೊದಲಿಗು ಒಂದೆ, ಅಂತ್ಯಕ್ಕು ಒಂದೆ, ಅಂದರೆ ಅನಾದಿಯಲ್ಲಿ ಒಬ್ಬನೇ ಆಗಿರತಕ್ಕಂಥಾ ಪರಮಾತ್ಮನೇ ಆದಿಮಧ್ಯದಲ್ಲಿ ಅನಂತ ಲೀಲೆಯಂಮಾಡಿ ಅತ್ಯಂತದಲ್ಲಿ ಪರಮಾತ್ಮ ಒಬ್ಬನೇ ಉಳಿಯುವದರಿಂದ ಉಳಿದದ್ದಕ್ಕೇನೇ ಶೇಷವೆಂತ ಹೆಸರಾಗಿರುವದು. ಇಂಥಾ ಶೇಷನ ಸ್ಮರಣೆಯು ಆಧಾರದಿಂದ ಭವದಕೂಪವು ಮುಚ್ಚುವದು. ಈ ಅಂತು ಕೌಪೀನವಂಬಿಟ್ಟು ಮಿಥ್ಯವಾದ್ದನ್ನೇ ಸತ್ಯವೆಂದೆಣಿಸುವರ ಮಾತಂತಿರಲಿ. ವೈಶ್ಣೇಪುರಾಣೀಕರು ಸಹಾ ಈ ಆತ್ಮಶೇಷನ ಆಧಾರದಿಂದ ಜಗತ್ತು ನಿಂತಿರುತ್ತದೆಂದು ಹೇಳುವದಂ ಬಿಟ್ಟು ಸರ್ಪ ಸಹೆಡೆಯಮ್ಯಾಲೆ ಜಗತ್ತು ನಿಂತಿರುವದೆಂದು ಹೇಳುವರು. ಮ್ಯಾಪಿನೋಪಾದಿಯಲ್ಲಿರುವ ಅಂತು ಕೌಪೀನಧಿಂದ ಸಹಜವಾದ್ದನ್ನ ಅರಿತುಕೊಂಡು ಸುಖಿಸಬೇಕು.

## ವಾಗಾದ್ವೈತವನ್ನು ನುಡಿಯಬಹುದೆ ?

ಅದ್ವೈತ ವಂದರೆ ಎರಡಿಲ್ಲದ್ದು. ಎರಡಿಲ್ಲದೆ ಒಂದೇ ಆದವಸು ಯಾರಮುಂದೆ ನುಡಿಯಬೇಕು. ಇಬ್ಬರಿದ್ದರೆ ನುಡಿಯುವಸು. ಒಬ್ಬನಾದರೆ ಏನೂ ನುಡಿಯುವದಿಲ್ಲ. ನನ್ನ ಬಾಯಲ್ಲಿ ನಾಲಿಗಿ ಇಲ್ಲವೆಂಬಂತೆ ಯಾಗುವದು. ಇದಕ್ಕಾಗಿ ಒಂದು ಕಥೆಯನ್ನು ಹೇಳುತ್ತೇನೆ. ಕೇಳು. ವಿವಾಹಕಾಲದಲ್ಲಿ ಮೂಢಲಿಂಗ

ಮದಲಿಂಗಿಯನ್ನು ಒಂದುಮಾಡುತ್ತಾರೆ. ಇವರಿಗೆ ಮದಲಿಂಗ ಮದಲಿಂಗಿ ಎಂದು ಹೆಸರ್ಯಾಕಾಯಿತೆಂದರೇ ಕಣ್ಣಿನಲ್ಲಿ ಕಾಮ, ಮನದಲ್ಲಿ ಕ್ರೋಧ, ಪ್ರಾಣದಲ್ಲಿ ಲೋಭ, ತನುವಿನಲ್ಲಿ ಮೋಹ, ಲಿಂಗದಲ್ಲಿ ಮದ, ಹಸುವಿನಲ್ಲಿ ಮತ್ಸರ, ಇರುವದರಿಂದ ಮದ ಲಿಂಗ ಮದಲಿಂಗಿ ಎಂದು ಆ ಕಾಲದಲ್ಲಿಮಾತ್ರ ಕರಿಯಬೇಕಾ ಯಿತು. ಈಸಂಸಾರ ಸಮುದ್ರದಲ್ಲಿ ನಿಮಗೆ ಹಡಗ ನಡಿಸಲಿಕ್ಕೆ ಬರುವದಿಲ್ಲೆಂದು ವುಭಯರಲ್ಲಿ ಇಬ್ಬರು ಅನುಭವಸ್ತರನ್ನು ಸಂ ಗಡ ಅತ್ತಿ ಮಣಿಯೆಂಬ ಹಡಗದಲ್ಲಿ ಕೂತು ನೀರೆರೆಯುವ ಸೌ ಜ್ಞೆಯನ್ನು ತೋರಿ ನಂತರ ಮದಲಿಂಗ ಮದಲಿಂಗಿ ವುಭಯರ ನ್ನು ಅದೇ ಹತ್ತೀ ಮಣಿಯೆಂಬ ಹಡಗದಲ್ಲಿ ಸಂಗಡ ಕೂಡ್ರಿಸಿ ನೀರನ್ನೆರೆಯುವರು. ನಂತರ ಈ ಸಮುದ್ರದಲ್ಲಿನಡದು ಪ್ರಯಾ ಸ ಪಟ್ಟುದಕ್ಕೆ ಉಭಯರಿಗೂ ಮಣಕಾಲಿಗೂ ಮಣಕೈಯ್ಯಿಗೂ ಮಸ್ತಕಕ್ಕೂ ಸಾಸಿವೆಯನ್ನು ಇಡುವರು. ಶೀತೋಷ್ಣಗಳಿಗೆ ಜೀರಿಗಿ ಬೆಲ್ಲವನ್ನು ಶಿರಗಿಗೆ ಕಟ್ಟಿಕಳುಹಿಸುವರು. ಸಂಸಾರ ಸ ಮುದ್ರದಲ್ಲಿ ಹಡಗವನ್ನು ನಡಿಸತಕ್ಕವರು ಸ್ತ್ರೀಯರಾದ್ದರಿಂದ ಇವರ ಚಿತ್ತವು ಸ್ಥಿರವಾಗಿ ಹಡಗದಲ್ಲಿಯೇ ಇದ್ದರೆ ಹಡಗವು ದ ಡವನ್ನು ಶೇರುತ್ತೆ. ಸ್ತ್ರೀಯರ ಚಿತ್ತವು ಹಡಗವನ್ನು ಬಿಟ್ಟು ಬ್ಯಾರೆಕಡಿಗೆ ಚಲಿಸಿದರೆ ಹಡಗವು ನೀರೊಳಗೆ ಮುಣಿಗಿ ಅನರ್ಥ ವಾಗುವದು. ಇದಕ್ಕೆ ತಾರಕಾಸುರರ ತ್ರಿಪುರವೆಸಾಕ್ಷಿ. ಇದು ವರೆಗು ಯಾರಿಗು ಅಂಜದೆ ಅಳುಕದೆ ಇದ್ದ ನೀವು ಇನ್ನುಮುಂ ದೆ ಹ್ಯಾಗೋ ಯೇನೋ ಯೆಂತೋ ಎಂಬ ಆಲೋಚನಿಯಿಂದ ಬಾಯಲ್ಲಿ ಅಕ್ಕಿಕಾಳು ಹಾಕಿಕೊಂಡಿರು ಯಂಬದಾಗಿ ಅಕ್ಕಿಕಾ ಳು ಹಾಕುವರು. ನಂತರ ಸತಿಯಿಂದಲಿ ಅಥವ ಪತಿಯಿಂದಲಿ

ಅಗಲಿ ಹೆಸರು ಹೇಳಿಸಿ ಫಕಫಕನೆ ನಗುತ್ತಾರೆ. ಯಾತಕ್ಕೋಸ್ಕರ ನಗುತ್ತಾರೆಂದರೇ ಒಂದಾದಲ್ಲಿ ಎರಡನೆ ಹೆಸರಿಲ್ಲಿರುವದು. ಎರಡನೆ ಹೆಸರು ಹೇಳಿದವ್ಯಾಲೆ ಒಂದಾದ ಹಾಗೆ ಅಗಲಿಲ್ಲವೆಂದು ನಗುತ್ತಾರೆ. ಕ್ಷೀರದೊಳಗೆ ನೀರನ್ನು ಬೆರಸಿದರೆ ನೀರೆನ್ನುವದಿಲ್ಲ. ನೀರಿನೊಳಗೆ ಕ್ಷೀರವನ್ನು ಬೆರಸಿದರೆ ಕ್ಷೀರವೆನ್ನುವದಿಲ್ಲ ಆದ್ದರಿಂದ ವಾಗಾದ್ವೈತವು ನಿಷೇಧವಾದ್ದು. ಲಿಂಗಪತಿಯು ಹಾಲುತುಪ್ಪದಲ್ಲಿರುವ ಮುಕುತಿಯನ್ನು ತೆಗದು ಶರಣ ಸತಿಯಾಗಿರುವ ನನ್ನ ಆಚಾರಲಿಂಗದೊಳಿಟ್ಟದರಿಂದ || ಪದ್ಯ || ಯನಗೆ ನೀನನ್ಯನೆ ನಿನಗೆ ನಾನನ್ಯಗೆ ನಿನಗೆನನಗೆ ಯೆಕತ್ವೆಯುಂಟು ನಿನಗೆ ನಾಕಾಯವು ಯನಗೆ ನೀ ಜೀವವು ಯನುತೆನ್ನ ಗುರುಪೇಳಿದ ಬೋಧೆ ಯನ್ನನು ನಿನ್ನಕೈಯೊಳು ಕೊಟ್ಟ ಗುರುರಾಯ ನಿನ್ನನು ಯನ್ನಕೈಯೊಳು ಕೊಟ್ಟ ನಿನ್ನ ನನ್ನನೇಕವು ಮಾಡಿದ ಮತ್ತಿನ್ಯಾರವುಂಟೆ ಲಿಂಗವುಪುಸಿ.

೧ ಚಿತ್ಪಿಂಡ
೨ ಪಿಂಡಜ್ಞಾನ
೩ ಸಂಸಾರ ಹೇಯ
೪ ಗುರುಕರಣ
೫ ದೀಕ್ಷಾಗುರು
೬ ಶೀಕ್ಷಾಗುರು
೭ ಮೋಕ್ಷಾಗುರು
೮ ಲಿಂಗಧಾರಣಂ
೯ ಕ್ರಿಯಾಲಿಂಗ
೧೦ ಭಾವಲಿಂಗ
೪೧ ಪ್ರಸಾದಿ
೪೨ ಕರುಣಾನುಗ್ರಹ
೪೩ ಇಂದ್ರಿಯಾನುಗ್ರಹ
೪೪ ಪ್ರಾಣದನುಗ್ರಹ
೪೫ ಗುರುಮಹಿಮೆ
೪೬ ಲಿಂಗಮಹಿಮೆ
೪೭ ಜಂಗಮ ಮಹಿಮೆ
೪೮ ಭಕ್ತಿಮಹಿಮೆ
೪೯ ಶರಣಮಹಿಮೆ
೫೦ ಕಾಯಾರ್ಪಿತ

ಮರುಳಾರಾಧ್ಯರು ಮಾಡುವ ಉಪದೇಶ.

| | |
|---|---|
| ೧೧ ಜ್ಞಾನಲಿಂಗ | ೫೧ ಕರಣಾರ್ಪಿತ |
| ೧೨ ವಿಭೂತಿ | ೫೨ ಭಾವಾರ್ಪಿತ |
| ೧೩ ರುದ್ರಾಕ್ಷಿ | ೫೩ ಪ್ರಾಣಲಿಂಗಿ |
| ೧೪ ಮಹೇಶ | ೫೪ ಜೀವಾತ್ಮ |
| ೧೫ ಕ್ರಿಯಾಗಮ | ೫೫ ಅಂತರಾತ್ಮ |
| ೧೬ ಭಾವಾಗಮ | ೫೬ ಪರಮಾತ್ಮ |
| ೧೭ ಜ್ಞಾನಾಗಮ | ೫೭ ಪ್ರಾಣಲಿಂಗಾರ್ಚನೆ |
| ೧೮ ಲಿಂಗನಿಷ್ಠೆ | ೫೮ ಶಿವಯೋಗ ಸಮಾಧಿ |
| ೧೯ ಸಕಾಯ | ೫೯ ನಿರ್ದೇಹಾಗಮ |
| ೨೦ ಅಕಾಯ | ೬೦ ನಿರ್ಭಾವಾಗಮ |
| ೨೧ ಪರಕಾಯ | ೬೧ ನಿಷ್ಟಾಗಮ |
| ೨೨ ಪೂರ್ವಾಶ್ರಯ ನಿರಸನ | ೬೨ ಲಿಂಗನಿಜ |
| ೨೩ ವಾಗಾದ್ವೈತ ನಿರಸನ | ೬೩ ಆದಿಪ್ರಸಾದಿ |
| ೨೪ ಹಂಸನಿರಸನ | ೬೪ ಅಂತ್ಯಪ್ರಸಾದಿ |
| ೨೫ ಅಷ್ಟತನುಮೂರ್ತಿನಿರ\| | ೬೫ ಸೈವಪ್ರಸಾದಿ |
| ೨೬ ಸರ್ವಗತ ನಿರಸನ | ೬೬ ಅಂಗ |
| ೨೭ ಧರ್ಮಾಚಾರ | ೬೭ ಲಿಂಗ |
| ೨೮ ಭಾವಾಚಾರ | ೬೮ ದೀಕ್ಷಾಪಾದೋದಕ |
| ೨೯ ಜ್ಞಾನಾಚಾರ | ೬೯ ಜ್ಞಾನ ಪಾದೋದಕ |
| ೩೦ ಶಿವಜಗನ್ಮಯ | ೭೦ ಪ್ರಸಾದ ಮಹಿಮೆ |
| ೩೧ ಭಕ್ತದೇಹಿಕಲಿಂಗ | ೭೧ ಶಿಷ್ಯ ಶುಶ್ರೂಷ |
| ೩೨ ಪಂಚಾಕ್ಷರಿ | ೭೨ ಸೈವ |
| ೩೩ ಸ್ವಯ | ೭೩ ಶರಣಪ್ರಿಯ ನೈಷ್ಠತೆ |

| | |
|---|---|
| ೩೪ ಚರ | ೭೪ ಭಾವನೈಷ್ಟತೆ |
| ೩೫ ಪರ | ೭೫ ಜ್ಞಾನ ನೈಷ್ಟತೆ |
| ೩೬ ತ್ರಿವಿಧ ಸಂಪತ್ತು | ೭೬ ಖಳೆ |
| ೩೭ ಚತುರ್ವಿಧ ಸಾರಾಯ | ೭೭ ಕಾಮನಿರಸನ |
| ೩೮ ಉಪಾಧಿ | ೭೮ ಪಿಂಡಾಕಾಶ |
| ೩೯ ನಿರುಪಾಧಿ | ೭೯ ಬಿಂದ್ವಾಕಾಶ ಈ ಮೊದ |
| ೪೦ ಸಹಜನಾಟ | ಲಾದ ನೂರಪಂದು ಸ್ಥಲಗಳು. |

ಗಣಿತ ವಿದಸು ಕೂಡಿ ಕಳಿಯುಬಲ್ಲಾತನೆ ತ್ರಿಣೆಯನೆನಿಪ ಲೆಕ್ಕಿಗರಮುಖ್ಯದೊಳು ಅಂದರೆ ಆದಿಅಂತ್ಯದಲ್ಲಿ ನಿತ್ಯನಾಗಿರುವ ಒಂದಾದ ಚಿದಾತ್ಮಸಂಕೂಡಿ ಜೀವಭಾವವಂ ಕಳೆಯುಸಂಥಾ ತನೇ ಸಾಕ್ಷಾತ್ ಶಂಕರನೆನ್ನಿಸಿಕೊಳ್ಳುವನು.

## ಜಡಾಜಡ ಲಕ್ಷಣ.

ಬ್ರಂಹ




ಪಂಚಭೂತಾತ್ಮಕವಾದ ದೇಹದಲ್ಲಿ ಎರಡು ಕಿವಿ, ಎರಡು ನೇತ್ರ, ಎರಡುನೇತ್ರ, ಎರಡು ಮೂಗಿನ ಸೊಳ್ಳು, ಎರಡು ಕಾಲು, ಎರಡು ಕೈ, ಎರಡು ನಾಲಿಗಿ, ಇರುವವು. ಎರಡು ಬಲಕ್ಕೆ ಕೂತುಕೊಂಡು ಬ್ಯಾರೆ ಬ್ಯಾರೆ ಪದಗಳನ್ನು ಹಾಡಿದರೆ ಆ ಎರಡು ಪದಗಳನ್ನ ಎರಡು ಕಿವಿಗಳಿಂದ ಜ್ಞಾಪಕಕ್ಕೆ ಇಟ್ಟುಕೊಳ್ಳುವದಿಲ್ಲಾ. ಯರಡ ಬಲಕ್ಕೆ ಇರುವ ವಿಗ್ರಹಗಳನ್ನು ಒಂದೇಸಾರಿ ಕಣ್ಣುಗಳಿಂದ ಪರೀಕ್ಷಿಸಿ ನಿಶ್ಚೈಸುವ ದಿಲ್ಲಾ. ಎ

ರಮ ವಿಕಸವಾದ ಪುಷ್ಪಗಳ ಮಕರಂದವನ್ನು ಎರಡು ಸೋಳ್ಳೆಗಳಿಂದ ಒಂದೇಸಾರಿ ಅರಿಯುವದಿಲ್ಲಾ. ಎರಡು ಕೈಗಳಿಂದ ಒಂದೇಸಾರಿ ಬರಿಯುವದಿಲ್ಲಾ. ಎರಡು ಕಾಲುಗಳಿಂದ ಒಂದೇವಮ ನಡಿಯುವದಿಲ್ಲಾ ಎರಡು ನಾಲಿಗೆಯಿಂದ ಒಂದೇಸಾರಿ ಸತ್ಯಾ ಅಸತ್ಯಗಳನ್ನು ಒಂದೇಸಾರಿ ನುಡಿಯುವದಿಲ್ಲಾ ಯಾತಕ್ಕಂದರೇ ಅಜಡನಾದ ಬ್ರಹ್ಮನು ಒಬ್ಬನೇ ಇರುವದರಿಂದ ಒಂದೇ ಶಬ್ದವನ್ನು ಕೇಳುತ್ತಾನೆ. ಒಂದೇ ರೂಪವನ್ನು ನೋಡುತ್ತಾನೆ. ಒಂದೇ ಬರಹವನ್ನು ಬರಿಯುತ್ತಾನೆ. ಒಂದೇ ಮಕರಂದವನ್ನು ಅರಿಯುತ್ತಾನೆ. ಒಂದುಕಾಲನ್ನು ಎತ್ತಿ ಮತ್ತೊಂದು ಕಾಲನ್ನು ಊರಿ ನಡಿಯುತ್ತಾನೆ. ಜಗಭ್ರಾಂತಿಯಾದ ಅಸತ್ಯವನ್ನು ಬಿಟ್ಟು ಶಿವಸತ್ತೆ ಒಂದೇ ಅಜಡನಾದ ವಾಕ್ಪತಿ ಒಬ್ಬನೇ ಇರುವನಲ್ಲದೇ ಮತ್ಯಾರು ಇಲ್ಲಾ.

**ಸತ್ಯಾ ಸತ್ಯ ಲಕ್ಷಣ.**

| | |
|---|---|
| ಮಂಚದಮೇಲೆಮಲಗಿರುವನು | ಹೃದಯಕಮಲದಲ್ಲಿ ಮಲಗಿರುವನು. |
| ಮಾಡಿಮೇಲೆ ಮಲಗಿರುವನು | ಸುಷುಪ್ತಿ ಇಂದಿರುವನು. |
| **ಅಸತ್ಯ.** | **ಸತ್ಯ.** |
| ಕೊಡ ಸೋರುತ್ತದೆ. | ಕೊಡತೂತುಬಿದ್ದು ನೀರುಸೋರುತ್ತದೆ |
| ಸಂದಿಕೋಲು ಕುಣಿಯುತ್ತದೆ | ಸಂದಿಕೋಲು ಕುಣಿಸುತ್ತಾನೆ. |
| ಕಾಯಿಗಳು ಬಂದವು. | ಕಾಯಿಗಳನ್ನು ತೆಗದುಕೊಂಡು ಬಂದರು |
| ಟಪ್ಪಾಲು ಬಂತು. | ಟಪ್ಪಾಲು ತೆಗದುಕೊಂಡು ಬಂದನು. |
| ಕೂಸು ಮೊಲೆಯನ್ನುಣ್ಣುತ್ತದೆ | ಕೂಸು ಮೊಲೆಹಾಲನ್ನುಣ್ಣುತ್ತದೆ. |
| ತೇರಿಗೆ ಅಂಗಿ ಹೊಲಿಸುತ್ತೇನೆ | ತೇರಿಗೆಬಗುವವನನಗೆಅಂಗಿವಲಿಸುತ್ತೇನೆ |
| ಅಂಗಿ ವಲಿಸುತ್ತೇನೆ. | ಅಂಗಿಗೆ ಆಗಿ ಬಟ್ಟೆಯನ್ನೊಲಿಸುತ್ತೇನೆ |

ಇವೇ ಮುಂತಾದ ಅತ್ಯಂತ ಸೂಕ್ಷ್ಮವಾಗಿರುವ ಸತ್ಯವ ಚನವನ್ನು ಯಾವಾತನು ನುಡಿಯುವನೋ ಅವನೇ ಆದಿನಾಲ್ಕ ನೆಯದಾದ ಸತ್ಯಲೋಕವೆ ತನ್ನದಾಗಿರುವದು. ಇವನು ಮ ರ್ತ್ಯ ಲೋಕದಲ್ಲಿದ್ದಾಗ್ಯೂ ದಕ್ಷಿಣದಿಕ್ಕು ಪ್ರಯಾಣಸ್ಥನಿಗೆ ಹಿಮ ವತ್ಪರ್ವತವು ದೂರವಾದಂತೆ ಇಹಲೋಕವು ದೂರವಾಗಿ ಹೋ ಗುವದು.

## ಪಾಪ ಪುಣ್ಯ ಲಕ್ಷಣ.

ಪಾಪ ಶರೀರದಲ್ಲಿ ಪುಣ್ಯಜೀವಿಯು ಇದ್ದು ರೂಪು, ರುಚಿ, ತೃಪ್ತಿಯನ್ನನುಭವಿಸುತ್ತ ಪಾಪ ಶರೀರದಿಂದ ಕರ್ಮಗಳನ್ನು ಮಾಡಿಸುತ್ತಾ ತಾನು ಸಾಕ್ಷಿಭೂತನಾಗಿದ್ದಾನೆ. ಮತ್ತು ಇಂ ದ್ರಿಯಗಳಿಗೆ ನ್ಯೂನತೆ ಉಂಟಾದಲ್ಲಿ ಜೀವನು ದುಃಖಿಸುತ್ತಾ ನೆ. ಇದು ಜೀವನಿಗೆ ದುಃಖವಲ್ಲವೋ ಯಂದರೆ ತನ್ನ ಮನೆಗೆ ಅಗ್ನಿ ಪ್ರಯೋಗವಾದರೆ ಜಡವಾದ ಮನೆಯೇ ದುಃಖಿಸುವದಿ ಲ್ಲ. ಆ ಮನೆಯು ಅಭಿಮಾನವಂ ಹೊಂದಿರುವ ಯಜಮಾನ ಜೀವನು ದುಃಖಿಸುತ್ತಾನೆ ಯಾಗಲು ನಿರಭಿಮಾನಿಯಾದ ಜೀವ ನು ಅಗ್ನಿಯಲ್ಲಿ ಸುಟ್ಟು ಹೋಗುವದಿಲ್ಲ. ಅಭಿಮಾನದಿಂ ದುಃ ಖವು ಎರಡು ಒಂದೇ ಕಲ್ಪಿತವಾಗಿರುತ್ತದೆ. ಕಲ್ಪಿತವು ಕ್ಷಣ ಭಂಗುರವಾದ ಸ್ವಪ್ನ ಪ್ರಾಯವು ಪಾಪವು ಸುಡುವದು. ಪುಣ್ಯ ವು ಸುಡುವದಲ್ಲ. ಆದ್ದರಿಂದ ಊರು ಸುಟ್ಟರು ಹನುಮಪ್ಪ ಹೊರಗೆ ಎಂಬ ಗಾಥೆ ಆಯಿತು. ಈ ಹನುಮಪ್ಪಗೆ ಪ್ರಾಣದೇ ವರೆಂತ ಕರಿಯುತ್ತಾರೆ. ಈ ಪ್ರಾಣಕ್ಕೆ ಜನನ ಮರಣವೇ ಇಲ್ಲ ದುದರಿಂದ ಸ್ಥಿರಂಜೀವಿ ಯೆಂತಲೂ ವಾಡಿಕೆಇದೆ. ಆಂಜನೇಯ ನೆಂತಲೂ ಪ್ರಸಿದ್ಧವಾಗಿಹೆ ‖ ಪದ್ಯ ‖ ಅಂಜನಧಿಂ ನಿಧಿರಂಜಿಸಿ

ಬಶಲದು ಅಂಜನಬೇಕೆಂಬುವದ್ಯಾಕೆ | ರಂಜಿಸಚಿತ್ತು ನಿರಂಜನ ಗಾಣಿಸೆ ರಂಜಿಸದೆನುತಲಿ ಗುರುಸುಳಿದ || ಈ ಪ್ರಾಣದೇವ ರಿಗೆ ಒಂದೇ ಕಣ್ಣು ಯಾಕಾಯಿತು. ಪೂರ್ವದಿಕ್ಕಿಗೆ ಹೋಗು ವ ನ್ಯಾಕೆ ಜ್ಞಾನ ಮುಖವೆ ದಕ್ಷಿಣಮುಖ. ಈ ಜ್ಞಾನಮುಖ ದಿಂಬ ಪೂರ್ವದಲ್ಲಿ ತಾನಿದ್ದ ಸ್ಥಿತಿಗೆ ಹೋಗುವನಾದ್ದರಿಂದ ದ ಕ್ಷಿಣಕ್ಕೆ ಮುಖವಾಯಿತು. ಪೂರ್ವಕ್ಕೆ ಹೋಗುವನಾದ ಪೂರ್ವ ದಲ್ಲಿ ಸತ್ತು ವಾಗಿತ್ತು. ಸತ್ತುವಾದ ಜೀವವು ಸತ್ತು ಹೋಯಿ ತು. ಇವನಿಗೆ ಜ್ಞಾನಚಕ್ಷು ಒಂದೇ ಉಳಿಯಿತು. ಚರ್ಮಚ ಕ್ಷು ಹಳ್ಳದ ದಂಡೆಯಲ್ಲಿ ಹೋಗದದ್ದರಿಂದ ಏಡಿ ತಿಂದು ಬಿಟ್ಟಿ ತು. ಶ್ವೇತವರ್ಣದ ಸತ್ವಗುಣ ಹರಿತ ವರ್ಣದ ರಜೋಗುಣ ಹ ಸುರು ವರ್ಣದ ತಮೋಗುಣ ಈ ಮೂರು ನಾಮಗಳುಳ್ಳವನು ಮತ್ತು ಜ್ಞಾನಚಕ್ರ ಉಳ್ಳದ್ದು. ಪುನಹ ಎರಡುಕಣ್ಣಿನ ವೇಷ ವನ್ನು ಹಾಕಿಕೊಂಡು (ತೋಡೆ) ಊರೊಳಗೆ ಬಂದನು.

ಪ್ರ. ದ್ವಿ. ೧ನೆ ಅಧಿಕರಣ. | ಬ್ರಹ್ಮ ಪ್ರ. ಪ್ರ. ೨-೩-೪-೫-
ಪ್ರ. ಚ. ೪ನೆ ಅ. ೫-೭ ಅ. | ೮-೯-೧೧ ನೆ ಅಧಿಕರಣನೋಡು.

## ಲಿಂಗದ ಕಾಯಿಗೆ ಶಿವದಾರವು ಮುಖ್ಯವಾಗಿಧೆ.

ಹ್ಯಾಗಂದರೇ! ಪ್ರಾಣಲಿಂಗದ ಕಾಯಕ್ಕೆ ಶಿವನೇ ಆ ಧಾರ ಸ್ವರೂಪವಾಗಿರುವದರಿಂದ ಶಿವಾಧಾರವಾಯ್ತು. ಜ್ಞಾ ಕವೆಂತಲೂ ಅನ್ನುವರು. ವಾಸಾಶೇಷ ನಾಲ್ಕುದಳ ವಿರುವದ ರಿಂದ ನಾಲ್ಕುದಳದ ಚೌಕಕ್ಕೆ ಶಿವನೇ ಆಧಾರವಾದನು.

## ವಿರೂಪಾಕ್ಷನ ದರ್ಶನ.

ವಾಮದೇವೋ ಮಹಾದೇವಾ | ವಿರೂಪಾಕ್ಷ ಸ್ತ್ರಿಲೋ ಚನಾ || ರೂಪಾಗಿ ಕಾಣುವ ಎರಡು ಲೋಚನಗಳು ವಿರೂಪಾ

ಗಿ ಕಾಣದೆ ಇರುವ ಲೋಚನೆ ಒಂದು ಈ ಮೂರರ ಕೂಟಕ್ಕೆ ತ್ರಿಕೂಟಾದ್ರಿಯನ್ನುವರು. ಮತ್ತು ಹೇಮಕೂಟದಲ್ಲಿರುವನು. ಅಂದರೆ ಆಬ್ರಹ್ಮನು ಒಂದು ಚಿನ್ನದಿಂದ ಕೂಡಿಕೊಂಡಿರುವನು. ಈ ಚಿನ್ಮಯನಾದ ಬ್ರಹ್ಮಜ್ಞಾನಿಯ ದರ್ಶನವು ನಿತ್ಯ ತೃಪ್ತಿಯ ನ್ನೈದುವಂಥಾದ್ದು.

## ಜ್ಞಾನ ಅಷ್ಟಾವರ್ಣ.

ನಾದವೇಗುರು, ಬಿಂದುವೇಲಿಂಗ, ಜ್ಞಾನವೇ ಜಂಗಮ, ಆನಂದವೇ ಪಾದೋದಕ, ತೃಪ್ತಿಯೇ ಪ್ರಸಾದ, ಜ್ಞಾನಾಗ್ನಿ ಯೇ ಭಸ್ಮ, ಇಂದ್ರಿಯಗಳ ಗುಣವಳಿದುದೇ ರುದ್ರಾಕ್ಷಿ, ಮನ ನ ತ್ರಾಣವೇ ಮಂತ್ರ. ಶ್ಲೋ॥ ಮನನಂ ತ್ರಾಯತೇ ಯ ಸ್ಮಾನ್ ತಸ್ಮಾನ್ ಮಂತ್ರಮಿ ತಿಸ್ಮೃತಂ ಮತ್ತು ಶಿವಸಾಕ್ಷಾ ತ್ಕಾರಮಾಡಿಸುವನು ಗುರು, ಶಕ್ತಿ ಸಾಕ್ಷಾತ್ಕಾರವೇ ಲಿಂಗ, ಶೇಷಜ್ಞಾನವೇ ಜಂಗಮ, ಹಿತವಿಹಿತವೆಂಬ ಭ್ರಾಂತಿಗಳೆದ ಸ ಮತ್ವವೇ ಭಸ್ಮ, ಏನೊಂದಿಲ್ಲದುದದರಲ್ಲಿ ಆನಂದವೇ ಪಾದೋ ದಕ, ಚಿನ್ಮಯವೇ ಪ್ರಸಾದ, ಲಿಂಗಲೀಲೆಯೇ ರುದ್ರಾಕ್ಷಿ, ಮ ನೋನಿಶ್ಚಯದಿಂ ಚಿತ್ತವಿಶ್ರಾಂತಿಯೇ ಮಂತ್ರ.



## ಮಕಾರ ಲಯಯೋಗ ಆನಂದಮಯ
## ಮರುಳಾರಾಧ್ಯರು ಮಾಡುವ ಉಪದೇಶ.

### ಮಿಶ್ರಷಷ್ಠವರ್ಣಗಳು.

| ಗುರು | ಲಿಂಗ | ಜಂಗಮ |
|---|---|---|
| ಬೋಧವೇ ಗುರು | ಚಿತ್ಪಿಂಡವೇ ಗುರು | ಸತ್ತುವೆ ಗುರು |
| ಜ್ಞಾನವೇಲಿಂಗ | ಚಿತ್ಪ್ರಾಣವೇ ಲಿಂಗ | ಚಿತ್ತುವೆ ಲಿಂಗ |
| ಆನಂದವೇಜಂಗಮ | ಚಿತ್ಕಳೆಯೇ ಜಂಗಮ | ತೃಪ್ತಿಯೇಜಂಗಮ |
| ಪಾದೋದಕ | ಪ್ರಸಾದ | ಭಸ್ಮ |
| ಚಿದ್ರಸವೇ ಗುರು | ನಿರುಪಮವೇ ಗುರು | ನಿತ್ಯವೇ ಗುರು |
| ಚಿನ್ಮಯವೇ ಲಿಂಗ | ನಿರ್ಗಂಧವೇ ಲಿಂಗ | ಅವಿರಳವೇ ಲಿಂಗ |
| ಚಿಜ್ಜ್ಯೋತಿಯೆ ಜಂಗಮ | ನಿಶ್ಶೇಷವೇ ಜಂಗಮ | ಪರಿಪೂರ್ಣತ್ವವೇ ಜಂಗಮ |

| ರುದ್ರಾಕ್ಷಿ. | ಮಂತ್ರ. |
|---|---|
| ಚಿದೇಂದ್ರಿಯಗಳೇ ಗುರು | ಚಿನ್ನಾದವೇ ಗುರು. |
| ಚಿದಾಪೇಕ್ಷೆಯೇ ಲಿಂಗ | ಮನನವೇಲಿಂಗ. |
| ಚಿದ್ವಿಲಾಸವೇ ಜಂಗಮ | ನಿರ್ಭಾವವೇ ಜಂಗಮ. |

## ಏಕ ಮುಖದ ರುದ್ರಾಕ್ಷಿ.

ಏಕ ಮುಖದ ರುದ್ರಾಕ್ಷಿಯು ಅತ್ಯಂತ ಶ್ರೇಷ್ಟವಾದ್ದೆಂತಲು ಇದರಿಂದ ಐಶ್ವರ್ಯ ಪ್ರಾಪ್ತಿಯಾಗುವದೆಂತಲು ಇದನ್ನು ವಿಶೇಷವಾಗಿ ದ್ರವ್ಯಕೊಟ್ಟು ತೆಗೆದು ಕೊಳ್ಳುತ್ತಾರೆ. ಅಂಥಾ ಐಶ್ವರ್ಯ ಕೊಡುವ ರುದ್ರಾಕ್ಷಿಯನ್ನ ಕ್ರಯಕ್ಕೆ ಕೊಡುತ್ತಾರೆಲ್ಲಾ ಇದು ಬಹಳ ಪರಮಾಶ್ಚರ್ಯವಾಗಿ ತೋರುತ್ತದೆ. ಐಶ್ವರ್ಯವನ್ನು ಕ್ರಯಕ್ಕೆ ಕೊಡಬಹುದೆ?

## ಸಮಾಧಾನ.

ಚತುರ್ದಶ ಇಂದ್ರಿಯಗಳನ್ನ ಕೈಬಿಟ್ಟರೆ ಒಂದೊಂದು ದುರ್ವ್ಯಾಪಾರಕ್ಕೆ ಹರಿದು ಅಧೋಗತಿಗೆ ಇಳಿದು ದುಃಖಕ್ಕೆ ಗುರಿಮಾಡುವವು. ಇವುಗಳನ್ನೆಲ್ಲಾ ಸರ್ವಸಮತ್ವದ ಒಂದೊಂದಾದ ಜ್ಞಾನ ಚಕ್ಷುವಿನಲ್ಲಿ ತಡದರೆ ಸದಾನಂದವೆಂಬ ಚಿದೈಶ್ವರ್ಯವು ಪ್ರಾಪ್ತವಾಗುವದು. ಆದ್ದರಿಂದ ಒಂದಾದ ಜ್ಞಾನವಕ್ಷುವಿಗೆ ಏಕ ಮುಖದ ರುದ್ರಾಕ್ಷಿಯಂತ ಹೇಳಬೇಕು.

## ಶಿವಪೂಜಾ ಲಕ್ಷಣ.

ಶಿವಪೂಜಾಕಾಲದಲ್ಲಿ ಶಂಖ ಜಾಗಟಿ ವಗೈರೆ ಶಬ್ದಗಳಂ ಮಾಡಿಸುತ್ತಾರಲ್ಲಾ ಇಂಥಾ ಘೋರವಾದ ಶಬ್ದದಲ್ಲಿ ಶಿವಸ್ಮರಣೆಯು ದೃಢವಾಗಿ ನಿಲ್ಲುವದೇ ಎಂದರೆ ಈ ಶಬ್ದವು ಓಂಕಾರವೆಂಬ ನಾದಬಿಂದು ಸಂಯುಕ್ತವಾದುದಾದ್ದರಿಂದ ನಾದಬಿಂದು ಸಂಯುಕ್ತವಾದುದೇ ಶಿವಲಿಂಗ. ಶ್ಲೋ॥ ಬಿಂದುಶ್ಶಕ್ತಿಶ್ಶಿವೋನಾದ - ಶಿವಶಕ್ತ್ಯಾತ್ಮಕಂಜಗತ್॥ ಈ ಶಿವಲಿಂಗದ ಸ್ಮರಣೆಯಿಂದ ಮನಸ್ಸು ನಿಶ್ಚಲವಾಗಿ ಆನಂದಿಸುವದಾದಕಾರಣ ಅಭ್ಯಾಸಿಗಳು ನಡೆಯತಕ್ಕದ್ದಾಗಿದೆ. ಇನ್ನು ಅನುಭವಿಗಳ ಸ್ಥಿತಿ

ಓಂಕಾರ ಪ್ರಣವ ಸರ್ವವ್ಯಾಪಿ ಅನಂತ ತಾರ ಸೂಕ್ಷ್ಮ ಶುಕ್ಲ ಪ್ಲುತ್ಯುತ ಏಕರುದ್ರ ಈಶಾನ್ಯ ಭಗವಾನ್ ಮಹೇಶ್ವರ ಮಹಾದೇವಾ ಎಂಬ ದಿವ್ಯನಾಮಂಗಳಿಂ ಪೇಳಿಸಿಕೊಳ್ಳುವದಾಗಿ ವಿಚಿತ್ರರೂಪದಿಂ ತಾರಕ ಬ್ರಹ್ಮವೇ ಪರಮಾತ್ಮನೆಂದು ಮತ್ತು ಚಿದಂಗನೆಂಬ ಭೂಮಿಯುಮ್ಯಾಲೆ ಚಿತ್‌ಸಮುದ್ರದ ಕೃಷ್ಣಾತ್ರ ಯಮದ ದ್ವಾರಾವತಿಯಲ್ಲಿ ವಾಗೀಶ್ವರಿಯೊಡಗೂಡಿದ ಪರಬ್ರಹ್ಮನಲ್ಲಿ ಸಮರಸಭಾವಮಂ ಹೊಂದಿದುದೇ ಶಿವಪೂಜೆ. ಈ ಬ್ರಹ್ಮನಲ್ಲಿ ಐಕ್ಯಂಗೊಂಡಾತನೇ ಶಿವಯೋಗಿ. ಈತನೇ ಜೀವನ್ಮುಕ್ತನು ಈ ಸ್ಥಿತಿ ಹ್ಯಾಗಂದರೆ ಇದಿರಿಟ್ಟು ಚಿಂತಿಸದಿಹುಕೇ ಶಿವಧ್ಯಾನ ಬಾಹ್ಯ ಕ್ರಿಯೆಯುಂಬಿಟ್ಟುದೇ ಪೂಜೆ. ಚಿತ್ ಸಮುದ್ರದಲ್ಲಿ ಮುಳಿಗಿದ ಮನಮಂ ಮರಳಿ ಚಲಿಸದಿಹುದೇ ಪ್ರದಕ್ಷಿಣ ಸಕಾರ ಹಕಾರಂಗಳೆಂಬ ಬೀಜಾಕ್ಷರಂಗಳಳಿದು ನಿಂತ ಪರಿಪೂರ್ಣ ಪ್ರಣಮದಲ್ಲಿನ ಸಾಮರಸ್ಯವೇ ನಮಸ್ಕಾರ ವೈಖರಿಯಾಗಿ ಶಬ್ದ ವ್ಯಾಪಾರವಳಿದುದೇಸ್ತೋತ್ರ. ಅಖಂಡಿತವಾದ ಚೈತನ್ಯಮಂ ಕರಣ ಸಂಗದಿಂ ಖಂಡಿತಮಾಡದಿಪ್ಪುದೇ ಜಪವು. ವಿಧಿನಿಷೇದಂಗಳ ನರಿಯದಿಹುದೇ ಸದ್ವರ್ತನವು ಪರಮಾತ್ಮಂಗೆ ತಾನು ಸಮಾನನೆಂದರಿದ ಕೂಟವೇ ಆತ್ಮಾರ್ಪಣವೆಂಬ ವೂಜೆಯು (೧) ಷೋಡಶೋಪಚಾರಗಳೊಳಗೆ ತಾನು ನಿನ್ನವನೆಂದುತನ್ನನರ್ಪಿಸಿದುದೇ ಆತ್ಮಾರ್ಪಣವೆನಿಸುವದು. ಇದೇಜೀವನ್ಮುಕ್ತನ ಸ್ಥಿತಿಯಂತ ಹೇಳಬೇಕು.

## ಮರುಳ ವೇದಾಂತ.

ಶಿಷ್ಯನ ವಿಜ್ಞಾಪನೆ—ಗುರುವೇ ನನಗೆ ಮುಕ್ತಿಮಾರ್ಗವಂ ತೋರಿಸಿಕೊಡಬೇಕು. ನಾನು ಹೇಳುವ ಮಾತನ್ನು ಅನ್ಯ

ರಿಗೆ ತಿಳಿಸಬೇಡ. ನೀನು ನನ್ನ ಹಸ್ತಪಾದಗಳ ಸೇವೆಯಂಮಾಡು. ನನ್ನ ಅಪ್ಪಣೆಯಂ ಅಂಗೀಕರಿಸು. ನಿನ್ನಲ್ಲಿರುವ ದ್ರವ್ಯವನ್ನೆಲ್ಲಾ ನನಗೆ ಕೊಟ್ಟುಬಿಡು. ನಿನಗೆ ಮುಕ್ತಿಮಾರ್ಗ ತೋರಿಸುವೆನು.

ಶಿಷ್ಯ--ಹಾಗಾದರೆ ಕಳ್ಳತನ, ವ್ಯಭಿಚಾರ, ಸುಳ್ಳು, ಇನ್ನು ಪಗೈರೆ ದುಷ್ಟಕೆಲಸಗಳ ನಡಿಸಬಹುದೆ?

ಗುರು--ಇವೆಲ್ಲಾ ಮಾಡಿಸುವಾತನೇ ಬ್ರಹ್ಮ.

ಶಿಷ್ಯ—ಹಾಗಾದರೆ ನಾನು ಯಾರು?

ಗುರು—ನೀನೇ ಬ್ರಹ್ಮ.

ಶಿಷ್ಯ—ನನಗೆ ಮದಪದಾರ್ಥಗಳನ್ನು ಸೇವಿಸುವ ಅಭ್ಯಾಸ ಇದೆ. ಅಪ್ಪಣೆಯೇನಾಗುವದು?

ಗುರು—ನನಗೂ ಈ ವಿಷಯ ಬಹಳ ಆನಂದವಾಗುವದು. ಮೊದಲು ಸ್ವೀಕರಿಸುವೆನು. ಉಳಿದ ಪ್ರಸಾದವನ್ನು ನೀನು ತೆಗೆದುಕೋ.

ಶಿಷ್ಯ—ಗುರುವೇ ಮತ್ತೊಬ್ಬನು ತಮಗೆ ಶಿಷ್ಯನಾಗಬೇಕೆಂತ ಪ್ರಯತ್ನಿಸುತ್ತಾನೆ.

ಗುರು—ಅವನು ಧನವಂತನಾಗಿರಬೇಕು. ಅವನಿಗೆ ರೂಪಾವತಿ ಸ್ತ್ರೀಯಳಿರಬೇಕು. ನಾನು ಹೇಳಿದಂತೆ ಕೇಳಬೇಕು. ಹೇಳಿದ ಮಾತುಗಳನ್ನು ಯಾರಿಗು ತಿಳಿಸಬಾರದು. ಹಾಗಾದರೆ ನನ್ನಗೆ ಸಮ್ಮತವೇ ಸರಿ.

ಶಿಷ್ಯ—ಅಪ್ಪಣೆಯಂತೆ ನಡಕೊಳ್ಳಲಿಕ್ಕೆ ಸತಿಪತಿ ಸರ್ವರು ಸಿದ್ಧರಾಗಿದ್ದಾರೆ. ಹಾಗಾದರೆ ಸಂತೋ ಸಂತೋಷ ಸಂತೋಷ.

ಶಿಷ್ಯ—ಮತ್ತೊಬ್ಬನು ತಮಗೆ ಶಿಷ್ಯನಾಗಬೇಕಂತ ಬರುತ್ತಾನೆ.

ಗುರು—ಅವನು ಹ್ಯಾಗಿದ್ದಾನೆ?

ಶಿಷ್ಯ—ಕೇವಲ ದರಿದ್ರನು, ಅವನ ಸತಿಯು ಕುರೂಪಿಯು.

ಗುರು—ಹಾಗಾದರೆ ಅವರಿಗೆ ಉಪದೇಶವಂ ಕೊಡಬಾರದು. ಸರ್ವವೂ ಬ್ರಹ್ಮವೇ ಆಗಿರುವದು. ಮತ್ಯಾತಕೆ ಉಪದೇಶವೆಂದು ನುಡಿಯುವನು.

ತೃ. ಚ. ೭-ನೆ ಅ.

## ಮರುಳು ವೇದಾಂತ.

ಗೃಹಕೃತ್ಯದ ಸಂಕಟ ಹೆಜ್ಜಾಗಿ ಜೀವನೋಪಾಯಕ್ಕೆ ವ್ಯಥೆ ಉಂಟಾದಕಾಲದಲ್ಲಿ ಡಾಂಭೀಕವೈರಾಗ್ಯ ವೇಷವಂ ಹಾಕಿಕೊಂಡು ತನಗೆ ಅನುಕೂಲವಾದ ಶಿಷ್ಯನಂ ಮಾಡಿಕೊಂಡು ಆ ಶಿಷ್ಯನು ಗುರುವಿನ ಪ್ರೋತ್ಸಾಹ ಅಂದರೆ ನಮ್ಮ ಗುರುಗಳು ನಿರಾಶಾಪುರುಷರು. ಹೊನ್ನುಹೆಣ್ಣು ಮಣ್ಣನು ತೆಜಿಸಿರುವರು. ಅದು ಹ್ಯಾಗಂದರೆ ಗೂಳಿಬಸವನು ಹುಲ್ಲು ನೀರು ಮತ್ತು ಗೋವನ್ನು ಮಲಗುವದಕ್ಕೆ ಮೃದುವಾದ ಭೂಮಿಯನ್ನು ಬಯಸ ತಕ್ಕದ್ದಲ್ಲ. ತಾವಾಗಿ ತೆಗೆದುಕೊಂಡುಬಂದು ಕೊಟ್ಟರೆ ಬಿಡುವದಿಲ್ಲ. ವೆಂಬಂತೆ ನಮ್ಮಗುರುಗಳು ಬಹಳ ದೊಡ್ಡವರೆಂದು ಜನಗಳಂ ಮರುಳುಮಾಡಿ ಸರ್ವವು ಬ್ರಹ್ಮಮಯವೇ ಆಗಿದೆಯೆಂದು ಶೂದ್ರ ಮತ್ತು ಚಂಡಾಲ ಗೃಹವಂಮಾತ್ರ ಬಿಟ್ಟು ಯಾರ ಮನೆಗಳ ಅಶನವಾದರು ಚಿಂತೆ ಇಲ್ಲವೆಂದು ಭುಂಜಿಸಿ ತತ್ವ ಶಾಸ್ತ್ರಗಳಂ ನುಡಿಯುತ್ತಾ ಗಿಣಿಯಂತೆ ನುಡಿದು ಕಡಿಗೆ ಯಮನ ವಶಕ್ಕೆ ಶಿಲುಕಿ ಅಪಾರವಾದ ನರಕವಂ ಅನುಭವಿಸು

ವರು. ಇವಕ್ಕೆ ಒಂದು ಗಿಳಿ ಇತಿಹಾಸವುಂಟು ಅದೇನಂದರೇ ಒಂದು ಗಿಳಿಯು. ಒಬ್ಬ ವ್ಯಾಧನ ಕೈಗೆ ಶಿಕ್ಕು ನಾಲ್ಕು ಮಾತು ಕಲಿತು ಕೊಂಡಿತು. ಆ ಮಾತುಗಳು ಯಾವ್ಯಾವಂದರೆ ಬಲೆ ಗಾರ ಬರುವನು. ಬಲೆಯನ್ನು ಹಾಕುವನು. ಬಲೆಯೊಳಗೆ ಬೀಳಬಾರದು. ಅಥವಾ ಬಿದ್ದರು ತಪ್ಪಿಸಿಕೊಳ್ಳು ಬೇಕು. ಎಂದು ಇವೇ ನಾಲ್ಕು ಮಾತುಗಳನ್ನು ಕಲಿತುಕೊಂಡು ಒಂದಾನೊಂದು ದಿನ ಹರಿದಪಂಜರದಿಂದ ಹೊರಟುಹೋಗಿ ತನ್ನ ಸಮೂಹವಂ ಶೇರಿದಕಾಲದಲ್ಲಿ ಯಥಾಪ್ರಕಾರ ಕಲಿತ ನಾಲ್ಕು ಮಾತುಗಳನ್ನು ಆಡಿಕೋತ ಇರುವಕಾಲದಲ್ಲಿ ಒಬ್ಬ ವ್ಯಾಧನು ಬಲೆಯನ್ನು ಹೊತ್ತುಕೊಂಡು ಬಂದು ಗಿಣಿಯು ಮಾತಾಡುವದನ್ನು ನೋಡಿ ವಳ್ಳೇದು ಬಲೆಯನ್ನು ವಡ್ಡಿ ನೋಡೋಣ ಬಲೆಯೊಳಗೆ ಬಿದ್ದರೂ ಸಮನೆ ಇಲ್ಲದಪಕ್ಷ ಬ್ಯಾರೆ ಉಪಾಯವನ್ನಾದರೂ ಮಾಡಿ ನೋಡೋಣ ವೆಂದು ಆಲೋಚಿಸಿ ಬಲೆಯನ್ನು ಸುತ್ತಲೂ ಹಾಕುವದರೊಳಗೆ ಆ ಸಮೂಹವೆಲ್ಲಾ ಅದೂ ಶೇರಿ ಬಲೆಯೊಳಗೆ ಬಿದ್ದಿತು. ಆಗಲೂಕೂಡ ವ್ಯಾಧನು ಕಲಿಸಿದ ಮಾತಗಳನ್ನು ಆಡಿಕೋತ ವ್ಯಾಧನ ಕೈಗೆ ಶಿಕ್ಕಿ ಪ್ರಾಣವಂ ಬಿಟ್ಟಿತು.

## ಏಕವಚನ ಬಹುವಚನ.

| ಏಕ ವಚನ. | | | ಬಹುವಚನ. |
|---|---|---|---|
| ೧ ಆತ್ಮ | .... | .... | ಆತ್ಮತ್ರಯ |
| ೨ ಆಕಾಶ | .... | .... | ಘಟಾಕಾಶ<br>ಮಠಾಕಾಶ<br>ಮಹದಾಕಾಶ<br>ಜಲಾಕಾಶ<br>ಮೇಘಾಕಾಶ |

೩ ವಾಯು .... .... ದಶವಾಯುಗಳು
೪ ಅಗ್ನಿ .... .... ದೀವಿಗೆ ಪಂಜು
೫ ಜಲ .... ನದೀ ಕೂಪ ಜಲಾದಿಗಳು
೬ ಪೃಥ್ವಿ .... ೫೬ ದೇಶಗಳು ೯ ಖಂಡಗಳು
೭ ಓಷಧಿ .... ಗಿಡ ಮರ ಬಳ್ಳಿಗಳು
೮ ಅನ್ನ .... ಅನೇಕ ಪದಾರ್ಥಗಳು
೯ ಕ್ಷೇತ್ರಜ್ಞ .... .... ೮೪ ಲಕ್ಷ ಜೀವರಾಶಿಗಳು
೧೦ ಪುರುಷ .... .... ಅನಂತಜಾತಿಗಳು
೧೧ ಮೃತ್ತಿಕೆ .... .... ಘಟಕುಂಡಾದಿಗಳು
೧೨ ಕ್ಷೀರ .... .... ಗೋವುಗಳು
೧೩ ಅವಸ್ಥಾ .... .... ಅವಸ್ಥಾತ್ರಯ
೧೪ ಅರಳೆ .... .... ತಂತುಪಿತಾಂಬರ
೧೫ ಲೋಹ .... .... ತಂಬಿಗೆ ತಾಳಿ ಕೊಡಪಾನಗಳು
೧೬ ನಾದ .... .... ದಶನಾದ
೧೭ ಕಟ್ಟಿಗೆ .... .... ಸಂದೂಕ ಅಲ್ಮಾರ ಕಿಟಕಿ
೧೮ ಬಣ್ಣ .... .... ಪೀತ ಶ್ವೇತಾದಿಗಳು

## ಪ್ರವೃತ್ತಿ ಲಕ್ಷಣ.

ಓಂ. ಈ ಆತ್ಮಶ್ರೇಷನೆಂಬ ಪರಮಾತ್ಮನು ಪರಶಕ್ತಿಯಿಂ ತೃಪ್ತಿಯನ್ನೈದುವದಕ್ಕಾಗಿ.

ನ. ಚಿಚ್ಛಕ್ತಿಯಿಂದಾನಂದವನ್ನು ಹೊಂದಿ.

ಮಾ. ಇಚ್ಛಾಶಕ್ತಿಯಿಂ ಭೋಗಿಸಿ.

ಶಿ. ಆದಿಶಕ್ತಿಯಿಂದ ಸಂತಸಂ ಕಲ್ಪಿಸಿ.

ಮ. ಜ್ಞಾನ ಶಕ್ತಿಯಿಂಕೂಡಿ.
ನ. ಕ್ರಿಯಾಶಕ್ತಿಯಿಂ ಕರ್ಮವ ನೆಸಗುತ್ತಿಹನು.

ಇದೇ ಪ್ರವೃತ್ತಿ ಲಕ್ಷಣ.

**ನಿವೃತ್ತಿ ಲಕ್ಷಣ.**

ಓಂ. ನ. ಕ್ರಿಯಾಶಕ್ತಿಯುಂಬ ಕರ್ಮವತ್ಯಜಿಸುಪಿಕೆ.
ಮ. ಜ್ಞಾನ ಶಕ್ತಿಯುಂಕೂಡಿ
ಶಿ. ಆದಿ ಶಕ್ತಿಯಿಂದ ಪ್ರಪಂಚವನ್ನು ಇಂದ್ರಜಾಲವೆಂದು ಪರಿಣಮಿಸಿ.
ವಾ. ತನ್ನಿಚ್ಛಾಶಕ್ತಿಯಿಂದ ಕಲ್ಪಿಸಿ.
ಯ. ಚಿಚ್ಛಕ್ತಿಯಿಂದಾನಂದ ಹೊಂದಿ.
ಓಂ. ಪರಶಕ್ತಿಯಿಂ ತೃಪ್ತಿಯನ್ನೈದುತ್ತಿಹನು.

**ಜ್ಞಾನಾಜ್ಞಾನ ಲಕ್ಷಣ.**

ಶಿಷ್ಯ. ದೇಹದೊಳಗೆ ಆತ್ಮನು ಒಬ್ಬನೇ ಇರುವಲ್ಲಿ ರಜ್ಜು ಸರ್ಪ ನ್ಯಾಯವೆಲ್ಲಿಯದು ?

ಗುರು—ಕಡಲೊಳಗೆ ತೆರೆಗಳು ಜನಿಸಿ ಕಡಲಲ್ಲಿಯೆ ಲಯಿಸಿ ನಿಸ್ತರಂಗಾಂಬುಧಿಯಂತೆ ಆತ್ಮನಲ್ಲಿ ಕಲ್ಪನ ಹುಟ್ಟಿ ರಜ್ಜುವನ್ನು ಸರ್ಪನೆಂದು ಭ್ರಮಿಸಿ ಆ ಕಲ್ಪಿತವು ಜ್ಞಾನದಲ್ಲಿ ಐಕ್ಯವಂಹೊಂದಿ ರಜ್ಜುವೆಂತಲೇ ಭಾವಿಸುತ್ತಿಹುದು.

**ಇಷ್ಟಲಿಂಗವು ಕಪ್ಪುವರ್ಣವುಳ್ಳದ್ದಾಗಿದೆ.**

ಇಷ್ಟಲಿಂಗವು ಅನಿಷ್ಟವಂ ಪರಿಹರಿಸುವದರಿಂದ ಇಷ್ಟಲಿಂಗವೆಂತ ಹೆಸರಾಗಿರುವದು. ಅನಿಷ್ಟವೆನ್ನುವದು. ಸಂಶಯ

ದಿಂದುಂಟಾದ ಪಾಪವು ಇದರಿಂದುಂಟಾದ ಅನೇಕ ದುಃಖಗಳು ಇಂಥಾ ದುಃಖವನ್ನು ಹೋಗೊಳಿಸಿ ಸುಖಸ್ವರೂಪ ವಾದದ್ದೇ ಇಷ್ಟಲಿಂಗ. ಮತ್ತು (ಇಷ್ಟ) ಇಚ್ಛೆಯು ಸ್ವತಂತ್ರವಾದ ಲೀಲೆಯುಳ್ಳ ನಾಮ ರೂಪು ರಹಿತವಾದದ್ದು. ಅಂದರೇ (ಶೂನ್ಯವು) ವಂಗ್ಮನಕ್ಕಗೋಚರವಾದದ್ದು ಎಂದು ಕೆಲವರು ಹೇಳುವವರು. ಇಷ್ಟಲಿಂಗವು ಶಿವಲಿಂಗ ಸ್ವರೂಪವೆಂದು ಭಾವಿಸಿರುವದು. ಸರಿಯುಷ್ಟೆ. ಶಿವಲಿಂಗಕ್ಕೆ ನೇತ್ರವೆಂತಲು ನೇತ್ರವು ಕಪ್ಪುವುಳ್ಳದ್ದಾಗಿದೆ ಯಂತಲು ಕೆಲವರು ಹೇಳುತ್ತಾರೆ. ಮತ್ತು ಪೀತ ಶ್ವೇತ ಹರಿತ ಮಾಂಚಿಷ್ಟ ಕವೋತ ಈ ಬಣ್ಣಗಳಿಂದ ಕೂಡಿದ ದೃಶ್ಯವೆಂಬ ಪರಿದಿಯನ್ನು ಮರೆಮಾಡಿಕೊಂಡು ಅಂತರೀಯವಾಗಿರುವ ದಕ್ಷಿಣಮೂರ್ತಿಯನ್ನು ಕಾಣದೆ ಕಾರಣ ಬ್ರಹ್ಮವನ್ನ ಬಿಟ್ಟು ಪರಧಿ ಹೊರಗೆ ಇರುವ ಕಾರ್ಯ ಬ್ರಹ್ಮವನ್ನು ಕಾರಣ ಬ್ರಹ್ಮವೆಂತ ಭಾವಿಸಿದಂತಾಯಿತು. ಇದು ಪ್ರತೀಕ ಧ್ಯಾನವೆಂತಲು ಹೇಳುವರು. ಅಂದರೆ ಪರದಿವಳಗೆ ಇರುವ ರಾಜನೇ ಇವನೆಂದು ಗುಮಾಸ್ತನನ್ನು ನೋಡಿ ರಾಜನೆಂಬ ಭಾವಿಸಿದಂತಾಯಿತು. ತರುವಾಯ ಆ ಗುಮಾಸ್ತನ ದ್ವಾರ ರಾಜನ ಸಂದರ್ಶನವಾದಾಗ್ಗೆ ಸಹಜವಾಗಿ ಗುಮಾಸ್ತನನ್ನಾಗಿಯು ಸಹಜವಾದ ರಾಜನನ್ನಾಗಿಯು ಹ್ಯಾಗೆ ತಿಳಿಯುತ್ತಾನೋ ಹಾಗೇ ದೃಶ್ಯವೆಂಬ ಪರದಿಯನ್ನ ಕಳದು ವಳಗಿರುವ ಸತ್ಯಜ್ಞಾನಾನಂದಮಯ ಸ್ವರುಪನೇ ನಾನೆಂತ ಅಪರೋಕ್ಷ ಜ್ಞಾನವೇ ಅಹಂಗ್ರಹಧ್ಯಾನ. ಈತನು ಪ್ರತೀಕ ಧ್ಯಾನವನ್ನು ಎಂದಿಗೂಮಾಡಲಾರನು.

ಕರ್ಮಜ್ಞಾನಗಳೊಳಗೆ ಯಾವದು ಶ್ರೇಷ್ಟವೆಂದರೇ.

ಪ್ರಜ್ಞದಪ್ಪಿ ಯಾರು ಕರ್ಮವಂಮಾಡುವದಿಲ್ಲ. ಸ್ಮೃತಿ ದಪ್ಪಿ ಯಾರು ಕರ್ಮವಂ ಮಾಡುವದಿಲ್ಲ. ಸ್ಮೃತಿದಪ್ಪಿಮಾಡುವ ಕರ್ಮಯಂಥಾದ್ದಂದರೆ ಪೂರ್ಣಸಿದ್ಧೆಯಿಂದಿರುವಾಗ್ಗೆ ಕನವರಿಕೆಯಿಂದ ಒಂದು ಪದಾರ್ಥವನ್ನು ಕೇಳಿದಂತಾಗುವದು. ಮತ್ತು ಬಾಲಕರು ಮಳಲ ಮನೆಯಂಕಟ್ಟಿ ಮಳಲಿಂದ ಮಾಡಿದ ಹೋಳಿಗೆಯನ್ನು ಬಾಯಿಗೆ ಹಾಕದೆ ಸುಳ್ಳುಸುಳ್ಳಾಗಿ ಚಪ್ ಚಪ್ ಯಂತ ತಿಂದಂತಾಗುವದು. ಪ್ರಶ್ನೆ—ಕರ್ಮವಂ ತ್ಯಜಿಸಿ ಬರೇ ಜ್ಞಾನದಿಂದ ಊಟ ಮಾಡಿದೆನೆಂದರೆ ತೃಪ್ತಿಯಾದೀತೆ. ಅಂದರೆ ಕರ್ಮದಿಂದ ಭೋಗ ಶಿದ್ಧಿಸುವದೇ? ಆಗಲಿ ಮೋಕ್ಷ ಸುಖವು ಎಂದಿಗೂ ಆಗುವದಿಲ್ಲಾ. ಆದರೆ ಬರೇ ಕರ್ಮಕ್ಕೇನೇ ಭೋಗವು ಶಿದ್ಧಿಸುವದಿಲ್ಲ. ಪ್ರಜ್ಞೆಯ ಸಂಕಲ್ಪಾನುಸಾರದಿಂದ ಭೋಗವು ಶಿದ್ಧಿಸುವದು. ಈ ಕಾರಣದಿಂದ ಜ್ಞಾನವೇ ಶ್ರೇಷ್ಟವೆಂತ ಆಯಿತು. ಎಲ್ಲಾ ಆನಂದಗಳಿಗೂ ಆತ್ಮಾನಂದವೇ ಅತ್ಯಧಿಕವಾಗಿರುವದು. ಹ್ಯಾಗಂದರೇ ೧ನೇದು ದ್ರವ್ಯ ೨ನೇದು ಪುತ್ರ, ೩ನೇದು ಶರೀರ, ೪ನೇದು ಇಂದ್ರಿಯಗಳು, ೫ನೇದು ಪ್ರಾಣ, ೬ನೇದು ಆತ್ಮ, ಒಂದಕ್ಕಿಂತ ಒಂದು ಹೆಚ್ಚು ಪ್ರಿಯತಮವಾಗಿರುವದು. ನೀಚ ಕರ್ಮಗಳನ್ನಾದರೂ ಮಾಡಿ ದ್ರವ್ಯ ಸಂಪಾದಿಸುವನು. ಈದ್ರವ್ಯವನ್ನ ವ್ರಯಮಾಡಿ ಪುತ್ರನನ್ನುಳಿಸಿಕೊಳ್ಳುವನು. ಪುತ್ರನಂ ಮಾರಿ ಶರೀರವಂ ಕಾಪಾಡಿಕೊಳ್ಳುವನು. ಶರೀರ ದಂಡನೆಯಾದರೂ ಇಂದ್ರಿಯಗಳಂ ಸಂರಕ್ಷಿಸಿಕೊಳ್ಳುವನು. ಇಂದ್ರಿಯಂಗಳಂ ಕಳಕೊಂಡಾದರೂ ಪ್ರಾಣವನ್ನುಳಿಸಿಕೊಳ್ಳುವನು. ಪ್ರಾಣವಂ ತ್ಯಜಿಸಿಯಾದರೂ

ಆತ್ಮಾನಂದವಂ ಹೊಂದುವನಾದ್ದರಿಂದ ಆತ್ಮಾನಂದವೇ ಶ್ರೇಷ್ಟವಾಗಿರುವದು.

ತೃ. ದ್ವಿ. ೧-೨-೩ ನೇ ಅಧಿಕರಣ ಮತ್ತು ತೃ. ತೃ. ೧೯ನೆ ಅ,

**ಮಸ್ತಕದಲ್ಲಿ ಶಿಖಾಬಿಡಿಸಬೇಕೇ ಹ್ಯಾಗೆಂದರೇ.**

ಮಸ್ತಕದಲ್ಲಿ ಬ್ರಹ್ಮ ಶಿಖಾ ಪಶ್ಚಿಮಯುಂಡು ಅನಾದಿಯಿಂದ ಮೂರು ಸ್ಥಾನಗಳು ಇದ್ದೇ ಇರುತ್ತವೆ. ಈ ಶಿಖಾ ಚಕ್ರದ ಮರ್ಮವಂ ಸದ್ಗುರುವಿನಿಂದರಿತು ಸುಖಿಸುವದಕ್ಕಾದ ಗುರ್ತ ಹೊರ್ತು ಬ್ಯಾರೆಯಿಲ್ಲ. ಶಾಖಾಗ್ರ ಚಂದ್ರನಂತೆ ಗುರಿಯನ್ನು ನೋಡಿ ಚಿತ್ತೈಕಾಗ್ರತೆಯಂ ಹೊಂದುವಂತೆಯೂ ನುತ್ತೂ ನವಖಂಡಗಳ ಮ್ಯಾಪು ಒಂದು ಗ್ರಾಮದ ಮ್ಯಾಪು ಒಂದು ಹೊಲದ ಮ್ಯಾಪು ಈ ಮ್ಯಾಪುಗಳ ನೋಡಿಕೊಂಡು ಇದೇ ನಮ್ಮ ಹೊಲ. ಇದೇ ನಮ್ಮ ದೇಶ, ಇದೇ ನಮ್ಮ ಗ್ರಾಮವೆಂದು ಅರಿತು ಕೊಳ್ಳುವದಕ್ಕೆ ಮಾತ್ರ ನಿಜವಾದ್ದಾಗಿರುತ್ತೆ. ಹೊರತು ಅನುಭವಿಸುವದಕ್ಕೆ ಈ ಮ್ಯಾಪಿನಲ್ಲಿರುವ ಹೊಲವು ಬೆಳೆಯುವದಿಲ್ಲ. ಈ ಮ್ಯಾಪಿನಲ್ಲಿರುವ ಗ್ರಾಮದಲ್ಲಿ ಮನೆಗಳಿಲ್ಲ ಈ ಮ್ಯಾಪಿನಲ್ಲಿರುವ ದೇಶದಲ್ಲಿ ಗ್ರಾಮಗಳಿಲ್ಲ. ಆದ್ದರಿಂದ ಕಾಣುವದೆಲ್ಲಾ ಸತ್ಯವಾದಾಗೂ ಇಂದ್ರಜಾಲದಂತೆ ಸ್ವಪ್ನದಂತೆ ತೋರಿ ಅಡಗುವದು.

**ಡಾಂಭಿಕ ವೇದಾಂತ.**

ಕಣ್ಣು ಬ್ಯಾನಿಯಿಂದ ಸೂರ್ಯನಂ ನೋಡುವದಿಲ್ಲವೆಂಬುವದು ಜ್ವರದಿಂದ ಪೀಡಿತನಾದವನು ಮೃಷ್ಟಾನ್ನವನ್ನು ವಿಷವಂತೆ ಭಾವಿಸೋಣವು ಮದನತಾಪಕ್ಕೆದರಿ ಷಡ್ರುಚಿಗಳಂ

ತ್ಯಜಿಸಿದ್ದೇನೆಂಬುವದು ನಿರ್ಜನ ಪ್ರದೇಶಕ್ಕೆ ಹೋಗಿ ಯೋಗಬಲಿಸಬೇಕೆಂದು ವಣಗಿದ ಗಜಿಗಿನ ಪೆಳೆಯಲ್ಲಿ ಮೌನದಿಂ ಕೂಡ್ರುವದು ವಾಕ್ಶುದ್ಧಿ ಇಲ್ಲದೆ ವೈರಾಗ್ಯದಿಂದಿರುವೆ ನೆಂಬುವದು ನಿಶ್ಚೈತನ್ಯನು ಕ್ಷಮೆಯಂ ಮಾಡಿದೆನೆಂಬುವದು ಇಷ್ಟಪದಾರ್ಥವು ದೊರಿಯದೆ ಹೋದಲ್ಲಿ ಉದಾಶೀನವಂ ಮಾಡುವದು ಹಿಡಿದ ವ್ರತವು ನಡಿಯದೆ ಇದ್ದಲ್ಲಿ ಶಿವಾರ್ಪಣವೆಂಬುವದು ಇವೇ ಮುಂತಾದ ಗುಣಗಳೇ ಡಾಂಭಿಕ ವೈರಾಗ್ಯದ ಲಕ್ಷಣ.

**ಯತಿಯಾಶ್ರಮಸ್ತರಿಗೆ ಮುದ್ರಾಧರ್ಮವಂ ಯಾತಕ್ಕೆ ಕೊಡುತ್ತಾರೆಂದರೇ:—**

ಶಂಕು ಕಂಚಿನಿಂದಮಾಡಿದ ಬಿಳಿಲು ಇವುಗಳೇ ಮುಖ್ಯಗುರ್ತು ತೋರಿಸ ತಕ್ಕವುಗಳು-ಮನಸ್ಸಿಗೆ ತವರವೆಂದು, ಬುದ್ಧಿಗೆ ಕಂಚೆಂದು, ಚಿತ್ತಾಳಿಗೆ ಚಿತ್ತವೆಂದು, ತಾಂಬ್ರಕ್ಕೆ ಅಹಂಕಾರವೆಂದು ಈವಳಗಾಗಿ ಹೇಳಲ್ಪಟ್ಟರುತ್ತದೆ ಯಷ್ಟೇ! ಬುದ್ಧಿಗೆ ಬೃಹಸ್ಪತಿಯಂತಲೂ ವಾಕ್‌ಸ್ಥಾನದಲ್ಲಿ ಬುದ್ಧಿ ಇರುವದರಿಂದ ಈ ವಾಕ್ಕೇ ನಾದಬಿಂದುವೆಂತಲೂ ಈ ನಾದಬಿಂದುವಂ ಗ್ರಹಿಸುವದಕ್ಕೆ ಶ್ರೋತ್ರನೆಂಬ ಶಂಕವನ್ನು ಈ ಶಂಕು ಎಂಬ ಶ್ರೋತ್ರಕ್ಕೆ ಪ್ರಸಾದಲಿಂಗವೆಂತಲೂ ಬುದ್ಧಿಯಲ್ಲಿ ಹೊರಡುವ ನಾದ ಶಿವ ಬಿಂದು ಶಕ್ತಿ ವಟವೃಕ್ಷದ ಬಿಳಿಲು ನಾದಬಿಂದು ಸಂಯುಕ್ತವಾದುದೇ ಶಿವಲಿಂಗ ಇಂಥಾ ಶಿವಲಿಂಗವನ್ನು ಪ್ರಸಾದಲಿಂಗದಿಂದರಿದು ಗುರುಲಿಂಗದಿಂದ ವಚಿಸುವದರಿಂದ ಪ್ರಸಾದವಾಕ್ಕೆಂತ ಆಗುವದು. ಈಪ್ರಸಾದವಾಕ್ಕೆಂಬ ಈಶ್ವರನಲ್ಲಿ ಲಕ್ಷವನ್ನಿಡುವ ಧ್ಯಾಸಕ್ಕಾಗಿಯೇ ಶಂಕು ಬಿಳಿಲು ಕೊಟ್ಟು ಜ್ಞಾನವಂ ಬೋಧಿಸುವರು. ಕಂಚು ನುಡಿಯುವದು ಬುದ್ಧಿಸ್ಥಾನ ಗುರು

ಲಿಂಗ. ಶೆಂಕು ಅಂದರೆ ಶಂಕ ಪ್ರಶ್ನಕೇಳುವದು. ಗುರುಲಿಂಗಕ್ಕೆ ಬಿಳಿಲು ಎಂಬ ಸೌಂಜ್ಞೆಯು ಶೆಂಕು ಬಿಳಿಲು ಈ ಎರಡು ಮು ಖ್ಯ ಗುಪ್ತಗಳನ್ನು ಕೊಡುವರು. ಇನ್ನು ವಿಶದವಾಗಿ ಹೇಳು ವೆನು ಕೇಳು. ವಚಿಸಿದ ವಾಕ್ಯನ್ನು ಪ್ರಸಾದಲಿಂಗದಿಂದರಿದು ವಚಿಸಿದ ವಾಕ್ಕಿನಂತೆ ವಚಿಸುವದಕ್ಕೆ ಪ್ರಸಾದವಾಕ್ಕೆಂತಲು ಈ ಸತ್ಯವಾದ ಪ್ರಸಾದವಾಕ್ಕು ಪಾಪ ಪುಣ್ಯಗಳನ್ನಂಟದೆ ಸಾಕ್ಷಿ ಯಾಗಿರುವದು. ಯಾತಕ್ಕಂದರೇ ಒಬ್ಬನು ವಚಿಸಿದಂತೆ ಇವ ನು ನುಡಿಯುವನು. ಬ್ಯಾರೆ ಯಂದರೆ ವಚಿಸದಿರುವ ಕಲ್ಪಿತ ವಾದ ಅಸತ್ಯವಾಕ್ಯನ್ನು ಈತನು ನುಡಿಯುವದಿಲ್ಲ. ಆದ್ದರಿಂದ ನುಡಿದಂತಾ ನುಡಿಯನ್ನ ಪ್ರಸಾದಲಿಂಗದಿಂದರಿದು ಗುರುಲಿಂ ಗದಿಂದ ನುಡಿಯುತ್ತಾನೆ. ಕಾರಣ ಇದಕ್ಕೆ ಪ್ರಸಾದ ವಾಕ್ಕೆಂ ತ ಆಗುವದು. ಇದಕ್ಕೆ ಒಂದು ಇತಿಹಾಸ ಉಂಟು. ಏನಂಧ ರೇ ಪ್ರತಿವಾದಿ ವಾದಿಯುವುತಕ್ಕೆ ಅಥವಾ ಅಭಿಮಾನಕ್ಕೆ ಕುಂ ದಕವಾದ ನುಡಿಯನ್ನು ನುಡಿಯುತ್ತಾನೆ. ಈ ವಾದಿಯು ನ್ಯಾ ಯ ಸ್ಥಾನದಲ್ಲಿ ಫಿರ್ಯಾದಿಯಂ ಮಾಡಿದ್ದಕ್ಕೆ ಆ ನ್ಯಾಯಾಧಿಪತಿ ಯು ವಾದಿ ಪ್ರತಿವಾದಿ ಉಭಯರನ್ನು ಸಾಕ್ಷಿಯಾಗಿರುವ ಮ ನುಷ್ಯನನ್ನು ಹಾಜೂರು ಪಡಿಸಿಕೊಂಡು ಸಾಕ್ಷಿಯನ್ನು ವಿಚಾರಿ ಸಲು, ಆ ಸಾಕ್ಷಿಯು ಪ್ರತಿವಾದಿಯು ನುಡಿದ ನುಡಿಯನ್ನು ಕೇಳಿ ಸತ್ಯವಾಗಿ ನುಡಿಯುತ್ತಾನೆ. ಕೇಳಿದ ನುಡಿಯನ್ನೇ ಹೇ ಳಿರುತ್ತಾನಾದ್ದರಿಂದ ಈ ಸತ್ಯನುಡಿಯು ಪಕ್ಷವಂ ವಹಿಸಿ ನ್ಯಾ ಯಾಧಿಪತಿಯು ಆಪರಾಧಿಗೆ ಶೀಕ್ಷೆಯಂ ವಿಧಿಸುತ್ತಾನೆ. ನುಡಿ ದ ನುಡಿಯಂ ಬಿಟ್ಟು ಕೇಳದೆ ಇರುವ ಅಸತ್ಯ ನುಡಿಯಂ ಸಾ ಕ್ಷಿಯು ಹೇಳುವದಾದರೆ ಅಪರಾಧಿಯು ಹೆಡ್ಡಿಂಗಿಗೆ ಶೇರಿಸಿ ತಕ್ಕ

ಪ್ರಾಯಶ್ಚಿತ್ತವಂ ವಿಧಿಸುತ್ತಾನೆ. ಹಾಗೆ ಪಾಪಪುಣ್ಯಾದಿಗಳಿಗೆ ಒಳಗಾಗದೆ ಸಾಕ್ಷಿಭೂತನಾಗಿರುವ ಶಿವಯೋಗಿಯು ಕಲ್ಲಿನಗುಡಿ ಶಬ್ದದಂತೆ ನುಡಿದ ವಾಕ್ಕನ್ನೇ ನುಡಿಯುತ್ತಾನೆ. ಕಾರಣ ಈ ಸತ್ಯವಾದ ಪ್ರಸಾದ ವಾಕ್ಕನ್ನನುಸರಿಸಿ ಪರಮಾತ್ಮನು ಈತನ ಪಕ್ಷವಾಗಿಯೇ ತೀರ್ಮಾನಿಸುವನು ಆದ್ದರಿಂದ ಇಂಥಾ ಮಹನೀಯರ ಪ್ರಸಾದವಾಕ್ಕು ಕ್ರೂರವಾಗಿದ್ದರೆ ಕೆಟ್ಟಫಲವು ಸೌಮ್ಯವಾಗಿದ್ದರೆ ಒಳ್ಳೇ ಫಲವು ಆಗುವದು. ಇದರಿಂದ ಮಹನೀಯರಲ್ಲಿ ಹೋಗಿ ಒಳ್ಳೇಮಾತುಗಳನ್ನು ಆಡಿಸಿಕೊಂಡು ಬರುವರು. ಪ್ರಶ್ನೆ—ಇವರೇನು ಸ್ವತಃ ನುಡಿಯಲಿಲ್ಲವಲ್ಲ. ನನ್ನ ನುಡಿಯಂತೆ ನುಡಿದಿರುವರು. ಸಮಾಧಾನ ಮೊದಲು ಲೋಹವಂತಿರುವ ನಿನ್ನನುಡಿಯು ಮಹನೀಯರ ಪರುಷದ ಮುಸಿಯಂತಿರುವ ಶ್ರೋತ್ರವೆಂಬ ಪ್ರಸಾದಲಿಂಗೆದಲ್ಲಿ ಬಿದ್ದು ಪರಿಶುದ್ಧವಂ ಹೊಂದಿ ಗುರುಲಿಂಗದಲ್ಲಿ ಭಂಗಾರವಾಗಿ ಶಿದ್ಧಿಯಂ ಹೊಂದಿಬರುವದರಿಂದ ಆ ಚಿನ್ಮಯನು ಒಳ್ಳೇ ಫಲವಂ ಕೊಡುವನು. ಇದಕ್ಕೋಸ್ಕರವೇ ಭಂಗಾರದ ಬಾಯಿಯಿಂದ ಬಂದಂತೆ ಆಗುವದೆಂದು ಗಾದಿಯಾಗಿರುವದು. ಅಭ್ಯಾಸಿಗಳಿಗೆ ಧ್ಯಾಸವನ್ನಿಡುವದಕ್ಕಾಗಿ ಗುರ್ತಿಗೋಸ್ಕರ ಶಂಕು ಬಳಿಲು ಕೊಡುತ್ತಾರೆ. ಇದಕ್ಕೆ ಜ್ಞಾನಿಗಳು ವಾಕ್ಪರುಷವೆನ್ನುವರು. ಇದೇ ವಾಕ್ಸಿದ್ಧಿಯು ಇದೇ ನಿಗ್ರಹಾನುಗ್ರಹ ಸಾಮರ್ಥ್ಯತ್ವವು.

ದೇವಸ್ಥಾನದಲ್ಲಿ ಹೋಗಿ ಅಂಗಾರವನ್ನು ಯಾತಕ್ಕೆ ಧರಿಸುತ್ತಾರೆಂದರೇ, ಅಂಗಹರ ಕೆಟ್ಟ ದುರ್ಗುಣಗಳಿಂದ ಕೂಡಿದ ಅಭಿಮಾನವುಳ್ಳ ದೇಹವನ್ನು ದಹಿಸಿ ಆಚಿದಂಗವನ್ನು ಧರಿಸಬೇಕೆಂದು ಸೂಚಿಸಿದಂತಾಯಿತು. ಇದು ದಾರಿತೋರಿಸಿ ಕೊಡುವ

ಸ್ತಂಭದಂತೆ ಗುರ್ತುವುಳ್ಳದ್ದು. ಮತ್ತು ದೇವಸ್ಥಾನಗಳಲ್ಲಿ ಉತ್ಸವವೆಂತ ಒಂದು ವಿಗ್ರಹವನ್ನು ಹೊತ್ತುಕೊಂಡು ಅದರ ಮುಂದೆ ವಾದ್ಯವನ್ನು ಮತ್ತು ನಾಯಕಸಾನಿ ಯವರಿಂದ ಹಾಡುಗಳನ್ನು ಹಾಡಿಸುತ್ತ ವಾದ್ಯಧ್ವನಿಗೆ ಕೆಲವರು ತಲೆಯನ್ನು ತೂಗುತ್ತ ಆನಂದ ಪಡುವರು. ಕೆಲವರು ನಾಯಕಸಾನಿಯುವರ ಹಾಡನ್ನು ಕೇಳಿ ಆನಂದಪಡುವರು. ಈ ಆನಂದಕ್ಕೇನೆ ಉತ್ಸವವೆಂತ ಹೆಸರಾಗಿರುವದು. ಬಲ್ಲನುಭವಿಗಳು ಅಭ್ಯಾಸಿಗಳಿಗೆ ಈ ಮೂಲಕವಾಗಿ ಈ ವಿಗ್ರಹದ ಮುಂದೆ ನಿಂತುಕೊಂಡು ಹೇಳುವದಕ್ಕಾಗಿ ವಚನಶಾಸ್ತ್ರವನ್ನು ಖಡ್ಗವೆಂದು ಸಂಶಯದ ವೃಕ್ಷವನ್ನು ಛೇದಿಸುವ ಖಡ್ಗವ್ರೋ ಯಂಬಂತೆ ಹೇಳುವರೇನಂದರೆ ಖಡ್ಗ ಕಲ್ಲುದೇವರ ಪೂಜೆಯಂ ಮಾಡಿ ಕತ್ತೆಗಳಾಗಿ ಹುಟ್ಟಿದರು ಕಲ್ಲು ನಾಗರಕಂಡರೆ ಹಾಲೆರಿಯುವರು. ಜೀವದ ಸರ್ಪಕಂಡರೆ ಬಡಿಯನ್ನುವರು. ಮನಿಗೆ ಜಂಗಮಬಂದರೆ ಕೈಕೆಟ್ಟಿದ್ದಾವೆಂದು ಹೇಳಿಕಳುಹಿಸುವರು. ಇಂಥಾವರನ್ನ ಸಾಮಾನ್ಯಪದಾರ್ಥದೊಳಗೆ ಸಾಮಾನ್ಯವಸ್ತುವನ್ನು ಯದೆದ್ದಿ ಹೊಡಿ ಯಂಬ ವಿಷಯವನ್ನು ಘಂಟಾಘೋಷವಾಗಿ ಈಗಲೂ ಸಹ ಹೇಳುತ್ತಾರೆ. ಇವುಗಳೆಲ್ಲಾ ನಿಷೇಧ ಜಂಗಮನೇ ಶ್ರೇಷ್ಟವೆಂತ ಹೆಸರಿಟ್ಟುಕೊಂಡು ದೇವರಮುಂದೆ ಜಂಗಮನ ಉತ್ಸಹವನ್ನು ಮಾಡಿಸುತ್ತಾ ಭಹುಜನಗಳ ಮಧ್ಯನಿಂತು ಕೆಟ್ಟ ಸಂಶಯವೆಂಬ ಕರ್ಮದ ವೃಕ್ಷವನ್ನು ಚೇದಿಸುವ ಖಡ್ಗವನ್ನು ಇದರ ವಿಷಯವನ್ನು ತಿಳಿಸಿದನು. ಮತ್ತು ಈಗ ಸಭೆಯು ಅಲ್ಲಲ್ಲೇ ಮಾಡುವರು. ಇಂಥಾ ವಿವೇಕವಂ ಹುಟ್ಟಿಸುವದಿಲ್ಲ. ಯಾಕಂದರೆ ವಿಶೇಷ ದ್ರವ್ಯವಂ ಶೇಖರಿಸಿ ಹಲಾಕ ಮಾಡುವದಲ್ಲದೆ ಹಲಾಕ ಶಬ್ದವನ್ನೇ

ಲೋಮ ವಿಲೋಮ ಮಾಡಿ ಕಲಹವನ್ನೆಬ್ಬಿಸುವರು. ಹೀಗೆ ಪ್ರಾಚೀನರು ಮಾಡಲಿಲ್ಲಾ ರಥೋತ್ಸವವೆಂದು ಕಣ್ಣಿಗೆ ಆನಂದವಂ ತೋರಿ ಮನಸ್ಸಿನ ಸಂಶಯವಂ ಭೇದಿಸುವ ಖಡ್ಗವಂ ಜ್ಞಾನಚಕ್ಷುವಿಗೆ ತೋರಿಸಿ ಅವರವರ ದ್ರವ್ಯವನ್ನೇ ಕಲಹವಿಲ್ಲದೆ ಸಂತೋಷದಿಂ ವ್ರಯಮಾಡುವಂತೆ ಉಪಾಯದಿಂ ಸಭೆಯನ್ನು ಈಗಾಗುವ ಸಭೆಗಳಿಗಿಂತಲೂ ಲಕ್ಷಪಾಲು ಜನರಂ ಕೇರಿಸುವರು. ಇದನ್ನು ಮನೋರಥೋತ್ಸವವೆಂತಲೂ ಈಗಮಾಡುವದು ನೇತ್ರೋತ್ಸವವೆಂತಲೂ ಹೇಳಬಹುದು.

ಆತ್ಮನೆಂಬ ಶೇಷನು ಘಟವೆಂಬ ಪರೆಯನ್ನು ಬಿಡುವದಕ್ಕಿಂತಮುಂಚೆ ನಡಿಯುವ ಚಿನ್ಹಗಳ್ಯಾವಂದರೆ ಮೂರುದಿನ ವಾಯಿದೆ ಯೊಳಗೆ ನಾಶಿಕವು ಕಾಣುವದಿಲ್ಲ. ಆರುದಿನ ವಾಯಿದೆಯೊಳಗೆ ಹುಬ್ಬುಕಾಣುವದಿಲ್ಲ. ಒಂದುದಿನ ವಾಯಿದೆಯೊಳಗೆ ತನ್ನ ನಾಲಿಗಿಯು ಕಾಣುವದಿಲ್ಲ ಹದಿನೈದು ದಿವಸವಾಯಿದೆಯೊಳಗೆ ತರ್ಜನೀ ಬೆರಳಿನಿಂದ ದೀಪವಂ ನೋಡಿದರೆ ಬೆರಳು ಕಾಣದೆ ದೀಪವು ಎರಡಾಗಿ ತೋರುವದು. ಮೂರುಘಂಟೆ ವಾಯಿದೆಯೊಳಗೆ ಬಲಗಾಲು ಬಲಗೈ ಮುಂದು ಯಡಗಾಲು ಯಡಗೈ ಮುಂದಾಗಿ ನಡಿಯುತ್ತಾನೆ. ಒಂದು ಘಂಟೆ ವಾಯಿದೆಯೊಳಗೆ ಭೇರಿ ಶಬ್ದವಾಗಿ ಶ್ರೋತ್ರವೇ ಕೇಳುವದಿಲ್ಲ. ಇವುಗಳಂ ಮುಂಚಿತವಾಗಿಯೇ ತಿಳಿದು ತಮ್ಮಿಷ್ಟಾನುಸಾರವಾಗಿ ಭೋಗಮೋಕ್ಷಗಳನ್ನು ಹೊಂದ ಬಹುದು. ಪದ್ಯ || ತನುವಿಯೋಗದೊಳೇನ ನೆನವನಂತಹುದಾ | ತನಗಲ್ಲಿ ನಿಜದೆಚ್ಚರಿರಬೇಕು || ಲವಣ ಸಮುದ್ರದಲ್ಲಿ ಬಿಟ್ಟಮೂತ್ರವು ಏಕತ್ವವಂ ಹೊಂದುವಂತೆ ಜೀವನು ಶಿವನಲ್ಲಿ ಐಕ್ಯವಂ ಹೊಂದುವನು.

ಅಂದಲ್ಲಿ ಅವನು ಬ್ಯಾರೆ ಇವನು ಬ್ಯಾರೆ ಅನ್ನುವದು ಶಬ್ದವೈಷ ಮ್ಯದ ಕಲ್ಪಿತವೆ ಆಗಲಿ, ಜೀವ ಶಿವನಿಗು ಭೇದವಿಲ್ಲ. ಅಂದರೆ ಬಹುತ್ವ ಅಲ್ಪತ್ವ ಪೂರ್ಣಜ್ಞ ಅಲ್ಪಜ್ಞತ್ವಉಂಟು ಮತ್ತು ಮ ನಿಯಲ್ಲಿರುವ ಆಕಾಶಕ್ಕಿಂತ ಗಡಿಗಿಯಲ್ಲಿರುವ ಆಕಾಶವು ಅವ ಕ್ಕಿಂತ ಸೂಜಿ ರಂಧ್ರದಲ್ಲಿರುವ ಆಕಾಶವು ಸಣ್ಣದಾದಾಗ್ಯೂ ಆ ಕಾಶದಲ್ಲಿ ಭೇದವಿಲ್ಲ. ಹಾವು ಸಕ್ಕರೆ ಶೇರು ಸಕ್ಕರೆ ಯಂತ ಶ ಬ್ದಭೇದ ಶೀ ಭೇದವಲ್ಲ. ಈ ನಿಜವಾದೆಚ್ಚರ ಇಲ್ಲದೆ ಹೋದರೆ ಪುನಃ ಹುಟ್ಟಿಬರುವನು. ಜೀವನು ಶಿವನು ವಂದೇ ಆಗುವ ಭಾ ಗದಲ್ಲಿ ಜೀವನು ಶಿವನನ್ನು ಕೂಡಬೇಕೆಂಬ ಬಯಕೆಯಾಕೆ ಅಂ ದರೆ ದುಷ್ಟನು ದುಷ್ಟನನ್ನು ಬಯಸಿದಂತೆ ಶಿಷ್ಯನು ಶಿಷ್ಯನ ನ್ನು ಬಯಸಿದಂತೆ ತನ್ನರೂಪನ್ನು ನೋಡಿಕೊಳ್ಳಬೇಕೆಂದು ಪ್ರ ತಿಬಿಂಬವನ್ನು ಬಯಸಿದಂತೆ ಜೀವನು ತನ್ನ ಸಮಾನನಾದ ಶಿವ ನನ್ನು ಬಯಸುವನು.

ಹೃದಯಾಕಾಶವು ವಂದಂಗುಲ ಪ್ರಮಾಣಉಳ್ಳದ್ದು ಅನಂತ ಕೋಟಿ ಬ್ರಹ್ಮಾಂಡಗಳನ್ನು ವಳಕೊಂಡಿರುವದು. ವಂದಂಗುಲ ಉಳ್ಳ ಅಂಗುಳ ಅಂದರೆ ಕಿರಿನಾಲಿಗಿ, ಇದು ಜ್ಞಾನಿಗಳು ನುಡಿ ಯು ತಕ್ಕಂಥಾದ್ದು. ಸತ್ವರೂಪ ಉಳ್ಳದ್ದು. ಈ ನಾಲಿಗಿಯು ದೊಡ್ಡ ನಾಲಿಗಿಯನ್ನು ಕೆಳೆದು ತನ್ನಲ್ಲಿ ಅಡಕವಾಗಿಟ್ಟುಕೊಂಡ ದಿನವೆ ಆತ್ಮಶೇಷನು ಜನ್ಮಪರೆಯನ್ನು ಬಿಚ್ಚಿ ಮತ್ತೊಂದು ಪ ರೆಯಂ ಧರಿಸುವನು. ನಾಲಿಗಿಗೆ ಆಕಾಶವೆಂತ ಹೆಸರ್ಯಾಕಾಯಿ ತು ಅಂದರೆ ಶಬ್ದ ಗುಣಕ ಮಾಕಾಶಂ ಶಬ್ದಗುಣ ಉಳ್ಳದ್ದು ನಾಲಿಗಿ ಪ್ರಥಮದಲ್ಲಿ ಶಿಷ್ಯನಿಗೆ ಅಹಂಕಾರವಂ ಬಿಡಿಸಬೇಕೆಂ ದು ಭಿಕ್ಷಾಪಾತ್ರೆಯಂ ಕೊಟ್ಟು ಸಂಚರಿಸಬೇಕೆಂದು ಸದ್ಗುರು

ಅನುಗ್ರಹಿಸಿದ ನಂತರ ಅದೆ ಅಹಂಕಾರವು ಇರುವದಾದರೆ ಶಾಸ್ತ್ರವೆಂದರೆ ಧರ್ಮಬೋಧಮಾಡುವದು. ಧರ್ಮಅಂದರೆ ದಂಡ ಈ ದಂಡವನ್ನ ರಾಜನು ಗುರುವು ಸದಾ ಹಸ್ತದಲ್ಲಿಡಿದುಕೊಂಡಿರುವರು. ಈ ಉಭಯರ ಸೌಂಜ್ಞೆಯಿಂದಲೆ ಅರಿದು ಶಿರಸಾವಹಿಸಿ ಆಚರಿಸುವವರಿಗೆ ಶೀಘ್ರವಾಗಿ ಕೃಪೆಯಾಗುವದು. ಇವನೆ ಉತ್ತಮ ಪುರುಷ. ಈಉಭಯರ ಅನುಜ್ಞೆಯಂ ಮೀರದೆ ಆಚರಿಸುವವರಿಗೆ ಆಲಸ್ಯವಾಗಿ ಕೃಪೆಯಾಗುವದು. ಇವನೇ ಮಧ್ಯಮ ಪುರುಷ. ಈ ಎರಡಕ್ಕು ತಪ್ಪಿನಡದರೆ ಅವರ ಹಸ್ತದಲ್ಲಿರುವ ದಂಡದಿಂದ ಹೊಡೆದು ಪ್ರಾಯಶ್ಚಿತ್ತದಿಂದ ಪರಿಶುದ್ಧನನ್ನಾಗಿ ಮಾಡುವರು. ಇವನೇ ಕನಿಷ್ಠ ಪುರುಷ. ಈ ದಂಡಕ್ಕು ಹೆದರದೆ ಅಹಂಕರಿಸಿದ್ದಾದರೆ ಅಂಥವನನ್ನು ನರಕ ಕೂಪದಲ್ಲಿಟ್ಟು ಮರೆತು ಬಿಡುವರು.

ಸೋಂಕಿದೊಂದುಕಾಲ, ಸೋಂಕಿದುದ ನರಿಯುವದೊಂದುಕಾಲ, ಅರಿದು ನಿಶ್ಚೈಸುವದೊಂದುಕಾಲ, ನಿಶ್ಚೈಸಿ ಪರಿಣಮಿಸುವದೊಂದುಕಾಲ, ಪರಿಣಮಿಸಿ ಆನಂದಿಸುವದೊಂದುಕಾಲ, ಆನಂದಿಸಿ ತೃಪ್ತಿಹೊಂದುವದೊಂದುವದೊಂದುಕಾಲ. ಹೀಗೆ ಸೋಂಕಿದ ಮಾತ್ರಕ್ಕೆ ಆರುಕಾಲುಗಳು ಏಕಕಾಲದಲ್ಲಿಯೇ ಐಕ್ಯತೆಯಂ ಹೊಂದಿರುವವು. ಬಣ್ಣ ಬಣ್ಣಗಳಿಂದ ತಿರುಗುವ ಪಟಗಳನ್ನು ಗುರ್ತಿಟ್ಟು ಗುಂಡಿನಿಂ ಹೊಡಿಯುವಂತೆ ಟೆಲಿಗ್ರಾಮಿನ ಅಕ್ಷರಗಳನ್ನು ಅತ್ಯಂತ ಸಮಾಧಾನಚಿತ್ತದಿಂದ ಗುರ್ತೈಸಿ ಬರಸುವಂತೆ ರಾಜನ ಮತ್ತು ಗುರುವಿನ ಅಂತರ್ಭಾವವರಿತು ಅತ್ಯಂತ ಏಕಾಗ್ರಚಿತ್ತದಿಂದ ಆಚರಿಸಿದರೆ ಸಂಪೂರ್ಣ ಅನುಗ್ರಹ

ವಾಗುವದು. ಸ್ವಲ್ಪ ತಪ್ಪಿದರೆ ಟೆಲಿಗ್ರಾಮಿನ ಅಕ್ಷರಗಳು ಅನರ್ಥವಾದಂತೆ ಪರಮಾತ್ಮನಲ್ಲಿ ಇಟ್ಟಿದ್ದ ಚಿತ್ತವು ಚಲನವಾದರೆ ಅತ್ಯಂತ ದುಃಖವೇ ಆಗುವದು. ಚಿತ್ತವನ್ನು ಒಂದೇಸ್ಥಾನದಲ್ಲಿ ನಿಲ್ಲಿಸಿದರೆ ಆಚರಿಸುವ ಬಗೆಯುಂತು? ಅಂದರೆ ಸ್ವಂತ ಕುಟುಂಬದಲ್ಲಿಯೆ ಚಿತ್ತವಂನಿಲ್ಲಿಸಿ ವ್ಯವಹಾರಗಳಂಮಾಡುವದಿಲ್ಲೇನು? ನಾನು ನನ್ನದೆಂಬಭಿಮಾನವಂ ಒಳಗಿಟ್ಟು ಹೊರಗೆ ವ್ಯವಹಾರಗಳ ಮಾಡಿದಂತೆ ನಾನಲ್ಲ ನನ್ನದಲ್ಲವೆಂಬ ನಿರಭಿಮಾನ ಅಂದರೆ ಸಮಾಧಾನದಿಂದ ವ್ಯವಹಾರಗಳನ್ನೂ ಜ್ಞಾನಿಗಳು ಮಾಡುವದಿಲ್ಲವೇ?

ರಾಜ್ಯ ಭಾರವು ರಾಜನ ಕೊರಳಿಗೆ ಬಿದ್ದಂತೆ ಶಿವಶಕ್ತಿ ಸದಾಶಿವ ಈಶ್ವರನಾದ ತನಗೆ ಮುವ್ವತ್ತೆರಡು ತತ್ವಗಳು ತನ್ನ ಕೊರಳಿಗೆ ಬಿದ್ದಿರುವದರಿಂದ ಇವುಗಳನ್ನೆ ಶಿವಯೋಗಿಯು ಮುವತ್ತೆರಡು ರುದ್ರಾಕ್ಷಿಗಳನ್ನ ಕಂಠಕ್ಕೆ ಮಾಲೆಯಾಗಿ ಧರಿಸುತ್ತಾನೆ.

ಜ್ಞಾನ ದ್ರಿಷ್ಟಿಗೆ ಬಿಳೇಗುಡ್ಡೆ ಯಾವದು? ಕರೇಗುಡ್ಡೆ ಯಾವದು? ಇದರೊಳಗಿರುವ ಬಿಂದುಯಾವದು? ಪ್ರತಿಬಿಂದು ಯಾವದು? ಅನುಗ್ರಹಿಸಬೇಕೆಂದು ವಿಜ್ಞಾಪನೆ ಮಾಡಿಕೊಳ್ಳಲು. ಗುರುವಿನ ಗುರುವಾದ ಪರಮಗುರು ಶ್ರೀಗುರು ಪಟ್ಟಾಧ್ಯಕ್ಷ ಚನ್ನವೀರಸ್ವಾಮಿಯು ಬೋಧಿಸಿದ ಮಂತ್ರವೇನಂದರೇ ನಿನ್ನ ಸತ್ವ ಪ್ರಧಾನವಾದ ಜ್ಞಾನಪ್ರಕಾಶವೇ ಶುಭ್ರವಾದ ಗುಡ್ಡೆ ರಜೋಗುಣಾತ್ಮಕವಾದ ಅವಿದ್ಯೆತಿಯಿಂ ಜನಿತವಾದ ತಮಸ್ಸನ್ನು ನುಂಗಿರುವದರಿಂದ ಇದೇ ಕೆಂಪು ಮಿಶ್ರವಾದ ಕರೇ ಗು

ಡ್ಡೆಯು ತ್ರೈಲ ಧಾರಪತ್ ಸ್ವರೂಪವಾದ ಜಾಗರೂಕತೆಯೇ ಓಂಕಾರವೆಂಬ ಬಿಂದು ಇದರೊಳಗೆ ತೋರುವ ಪ್ರತಿಬಿಂಬವೇ ವಾಚ್ಯಾರ್ಥ ಸತ್ಯವಾದ ಬಿಂಬವೇಲಕ್ಷ್ಯಾರ್ಥ ಇಲಕ್ಷ್ಯಾರ್ಥವೇ ನೀನೆಂದು ಜ್ಞಾನ ದ್ರಿಷ್ಟಿಯಿಂ ಇಪ್ಪತ್ತೊಂದನೇ ಸಂವತ್ಸರದಲ್ಲಿ ಅನುಗ್ರಹಿಸಿದ ಪರಮ ಗುರುವಿಗೆ ನಮಸ್ಕಾರ.

ನಕಾರವೇ ರಾಜಯೋಗ ಅಂದರೆ ಸ್ವತಂತ್ರಮಯು.
ಮಕಾರವೆ ಲಯಯೋಗ ಡಿ|| ಆನಂದಮಯು.
ಶಿಕಾರವೆ ಶಿವಯೋಗ ಡಿ|| ಶಿವಮಯು.
ವಕಾರವೆ ಹಠಯೋಗ ಡಿ|| ಶಾಂತಮಯು.
ಯಕಾರವೆ ಜ್ಞಾನಯೋಗ ಡಿ|| ವಿಶ್ವಮಯು.
ಓಂಕಾರವೆ ನಿರ್ವಾಣಯೋಗ ಡಿ|| ಸುಖಮಯು.








ದಕ್ಷಿಣ ಮುಖವಾಗಿರುವ ತಮ ಮೋಹ ಜಂಮ ನಿದ್ರೆ ಮೃತ್ಯು ಮಾಯೆ ಭಯ ಜರೆ ಈ ೮ ಕಳೆಗಳಿಂ ಕೂಡಿದ ಅಘೋರ ಮುಖದಿಂದುದ್ಭವಿಸಿದ ರೇವಣಾರಾಧ್ಯನು ಇಚ್ಛಾಶಕ್ತಿ ಇಂದಾನಂದರೂಪನಾಗಿ ಶ್ರೀ ವೀರ ಸಿಂಹಾಸನವೆಂದು ದಕ್ಷಿಣದಿಕ್ಕಿನಲ್ಲಿ ತಮ್ಮ ಸಿಂಹಾಸನದ ಗುರ್ತನ್ನು ಸ್ಥಾಪಿಸಿರುವರು. ಮಮಕಾರವಳಿದ ಮಹೇಶನಂ ಪರೀಕ್ಷಿಸಿ ಮಣಪೂರಕ ಚಕ್ರವೆಂದರೆ ಕಾಲಚಕ್ರವು ಯಾವಾಗ್ಯೂ ತಿರುಗುತ್ತಿರುವದು. ಇಂಥಾ ಚಕ್ರದಲ್ಲಿ ಸಿಲುಕಿ ವ್ಯಥೆಪಡುವವರನ್ನು ಕಡೆಗೆ ತೆಗದು ಉದ್ಧಾರಮಾಡಿದ್ದರಿಂದ ಜಗದ್ಗುರುವೆಂಬ ನಾಮವಂ ಪಡದು ರುದ್ರಾಕ್ಷಿ ಭಸ್ಮದಿಂ ತ್ರಿ

ಪ್ತಿಯಂ ಹೊಂದಿಸಿ ಕೃತಕೃತ್ಯನನ್ನಾಗಿ ಮಾಡುವದರಿಂದ ಈ ಎರಡು ವರ್ಣಗಳಿಂ ಕೂಡಿದ ಉಪದೇಶಕ್ಕೆ ಕರ್ತನಾದನು. ಹುಟ್ಟಿದ ಶಿಶುವಿಗೆ ಕಣ್ಣಿನಿಂ ನೋಡುವದು ಹಸ್ತದಿಂ ಪಿಡಿಯುವದು ಎರಡು ವರ್ಣಗಳು ಬಂದವು. ತನ್ನಿಂದ ಕಲ್ಪಿತವಾದ ಸೃಷ್ಟ್ಯಾದಿ ವರ್ಷಗಳು ೧೮ ವ್ಯಾಳ್ಯೆ ರೆಪ್ಪೆ ಬಡಿದರೆ ೧ ಕಾಷ್ಟ. ೩೦ ಕಾಷ್ಟ ವಾದರೆ ೧ ಕಲ. ೩೦ ಕಲವಾದರೆ ೧ ಮುಹೂರ್ತ. ೩೦ ಮುಹೂರ್ತ ೧ ದಿನ. ೧ ದಿನಕ್ಕೆ ೨೧೬೦೦ ಶ್ವಾಸಗಳು. ಇವುಗಳನ್ನು ೨ ರಿಂದ ಗುಣಿಸಿ, ೧ ಶೂನ್ಯವಂ ಸೇರಿಸಿದರೆ ೪೩೨೦೦೦ ಸಂವತ್ಸರಗಳು ೧ ಕಲಿಯುಗ. ಕಬ್ಬಿಣ ಭೂಮಿ. ಕಲಿಎರಡಾದರೆ ೧ ದ್ವಾಪರ. ೮೬೪೦೦೦ ಸಂವತ್ಸರ, ತಾಂಬ್ರ ಭೂಮಿ. ಕಲಿ ೩ ರಾದರೆ ೧ ತ್ರೈತಾಯುಗ. ೧೨೯೬೦೦೦ ಸಂವತ್ಸರ ಬೆಳ್ಳಿಭೂಮಿ. ಕಲಿ ೪ ಕಾದರೆ ೧ ಕೃತಯುಗ ೧೭೨೮೦೦೦ ಸಂವತ್ಸರ ಭಂಗಾರದ ಭೂಮಿ. ಕಲಿಯುಗದಲ್ಲಿ ಸ್ಥೂಲಕಾಯರು. ದ್ವಾಪರದಲ್ಲಿ ಸೂಕ್ಷ್ಮಕಾಯರು. ತ್ರೈತಾಯುಗದಲ್ಲಿ ಕಾರಣಕಾಯರು. ಕೃತಯುಗದಲ್ಲಿ ಪ್ರಣವರೂಪಿಗಳು. ಹೀಗೆ ತನ್ನಿಂದ ಕಲ್ಪಿತವಾದಕಾಲ, ತನ್ನಿಂದ ಕಲ್ಪಿತವಾದ ಕರ್ಮ, ತನ್ನಿಂದ ಕಲ್ಪಿತವಾದ ಕಾಮ, ಜೇಡ ಹುಳದಂತೆ ತನ್ನಿಂದಾದ ಕಾಲಚಕ್ರದಲ್ಲಿ ಬಿದ್ದು, ತನ್ನಿಂದಾದ ಕರ್ಮಾರಣ್ಯದಲ್ಲಿ ದಿಕ್ಕು ತಪ್ಪಿ, ಭಯಗ್ರಸ್ತನಾಗಿ ತನ್ನಿಂದಾದ ಕಾಮನ ಪಟಳಕ್ಕೀಡಾಗಿ, ತನ್ನಿಂದಾದ ಬ್ರಹ್ಮನ ಸೃಷ್ಟಿಗಂಜಿ, ತನ್ನಿಂದಾದ ಭವಸಮುದ್ರದಲ್ಲಿ ಈಜಾಡಿದಣಿದು. ತನ್ನಿಂದಾದ ರುದ್ರನ ಲಯಕ್ಕೆ ಹೆದರಿ, ತನ್ನಿಂದಾದ ಈಶ್ವರನ ಮಾಯಾಮಯಕ್ಕೆ ಮರುಳಾಗಿ, ತನ್ನಿಂದಾದ ಸದಾಶಿವನ ಜ್ಞಾ

ಪ ಧ್ಯಾನಗಳಿಗೊಳಗಾಗಿ, ತನ್ನಿಂದಾದ ಪರವಸ್ತುವ ಕೂಡಬೇಕೆಂಬ ಕಾಂಕ್ಷೆಯೆ ಶಕ್ತಿರೂಪಾಗಿ ತಾನೆ ಶಿವನೆಂಬುದ ಮರತವನನ್ನು ಕಾಡುತಿರ್ಪುದು. ಇಂದ್ರಿಯ ಜಯಕ್ಕೆ ಭೋಗಾಶತ್ಯಾಗವಲ್ಲದೆ ಮಣಿಮಂತ್ರೌಷಧಿ ಗುಡ್ಡಗಂಹರ ತೀರ್ಥಯಾತ್ರಾದಿ ನಿಯಮಾದಿಗಳು ಸಾಧಕ ವಾಗಲಾರವು. ಇಂದ್ರಿಯಗಳೆಂಬ ಸರ್ಪಗಳಿಂದ್ಯಾವನು ಕಡಿಯಲ್ಪಡದಿರುವನ್ನೋ ಅವನೆ. ಸತ್ಪುರುಷನು. ತೇಜಸ್ಸಿ ಮಿಂದದಂತೆ ಘಾಳಿಗೆ ತರಗೆಲೆಗಳಂತೆ ಗುರೋಪದೇಶದಿಂ ಅಜ್ಞಾನವು ಯಲ್ಲಿಗೋ ಹೋಗುವದು. ನಂತರ ಊದಿದ ದೀಪದಂತೆ ಪ್ರಪಂಚವು ಯಾವಲ್ಲಿಗೋ ಹೋಗುವದು. ಎಚ್ಚರವೇ ಆದಿತ್ಯವಾರ, ಆಲೋಚನೆಯೇ ಸೋಮವಾರ, ನೋಡುವದು ಮುಟ್ಟುವದೇ ಮಂಗಳವಾರ, ಗಮನಾಗಮನವೇ ಬುಧವಾರ, ನುಡಿಯೇ ಗುರುವಾರ, ಆಸೆಯೇ ಶುಕ್ರವಾರ ನಿರಾಶೆಯೇ ಶನಿವಾರ, ಅರುವತ್ತು ನಾಲ್ಕು ಭಾಷೆಗಳು ಕಲ್ಪಿತವಾದವುಗಳೇ- ಭಾಷೆಗಳು ಯಾವನಲ್ಲಿ ಕಲ್ಪಿತವಾದವೋ ಅವನೇ ಆರ್ಷಿ. ಜಡದೇಹಮಂಕಾಶಿ ಚಿತ್ಪಿಂಡವಂ ಧರಿಸಿದ್ದರಿಂದ ಕಶ್ಯಪಋಷಿ ಯಾದನು. ವಿಶ್ವವು ಮಿತ್ರಭಾವದಿಂ ಕಂಡದ್ದರಿಂದ ವಿಶ್ವಾಮಿತ್ರ ಋಷಿಯಾದನು. ವಿಶ್ವದಲ್ಲಿ ವಾಶಿಸಿರುವರೆಲ್ಲಾ ಶಿಷ್ಟರೆಂದು ಭಾವನೆಯಿದ್ದುದರಿಂದ ವಶಿಷ್ಟಋಷಿಯಾದನು. ಗಸ್ತ್ಯ ಅಂದರೆ ತಿರುಗುವಿಕೆ. ಅಗಸ್ತ್ಯ ಅಂದರೆ ತಿರುಗಾಡದೇ ಇರುವವನು. ಇವನು ಘಟವೆಂಬ ಗಡಿಗಿಯಲ್ಲಿ ಜನಿಸಿ ಕುಂಭಜನಾದನು. ಮನಸಾರಕ್ಕಿಂತ ಭಾರವಾದ್ದು ಯಾವದೂ ಇಲ್ಲದ್ದರಿಂದ ಭಾರದ್ವಜ ಋಷಿಯಾದನು. ದೇವೋಗಾವ್ರೋ ಬ್ರಾಹ್ಮಣೋ ಐಕರಾಶಿ ಯಂಬ ನ್ಯಾಯಕ್ಕನುಸಾರ

ವಾಗಿ ಅನಂತ ಗೋವುಗಳಿಂದೊಡಗೂಡಿ ದೇವಬ್ರಾಹ್ಮಣರಿಗೆ ತೃಪ್ತಿಗೊಳಿಸುವ ಭಾವವಿದ್ದುದರಿಂದ ಗೌತ್ತುಮ ಋಷಿಯಾದ ನು. ಕರ್ಮವೆಂಬ ತನ್ನ ಮಾಯಾಶಕ್ತಿಯಾದ ಮಿತ್ರಾದೇವಿಗೆ ಯಲ್ಲ ಜ್ಞಾನವನ್ನರುಹಿದ್ದರಿಂದ ಯಾಜ್ಞವಲ್ಕ್ಯಋಷಿಯಾದನು ಕರ್ತೃ ಕರ್ಮ ಕ್ರಿಯಗಳನ್ನೆಲ್ಲಾ ನಾನಲ್ಲದಿನ್ನ್ಯಾರು ಕಾಣುವರಿ ಲ್ಲ ವೆಂಬ ಭಾವವಿದ್ದುದರಿಂದ ಕಾಣ್ವಋಷಿಯಾದನು. ಶಬ್ದಶಾ ಸ್ತ್ರವಂ ರಚಿಸಿರುವನು ನಾನಲ್ಲದಿನ್ನ್ಯಾರು ರಚಿಸಿಲ್ಲವೆಂಬ ಭಾವ ವಿದ್ದುದರಿಂದ ಪಾಣಿನೀಯಋಷಿಯಾದನು. ಕರ್ಮ ಧರ್ಮಗಳ ಭೇದಾ ಭೇದಗಳನ್ನು ನಾನೆ ನುಡಿದಿರುವೆನಲ್ಲದೆ ಮತ್ತ್ಯಾರು ಅರಸಿಲ್ಲವೆಂಬ ಭಾವವಿದ್ದುದರಿಂದ ಮಾಂಡವ್ಯಋಷಿಯಾದನು ಇವರು ಪ್ರಣವುರೂಪಗಳ ಅಂಶಭೂತರು. ಇವರುಕೃತಯುಗ ದವರು. ಇದನ್ನು ಮನನ ಮಾಡುವವರೆ ಮನುಗಳು. ಪಂಚಾ ಗ್ನಿ ಮಧ್ಯದಲ್ಲಿ ಶಿವನಂ ಕುರಿತು ಮಾಡುವ ತಪಸ್ಸು ಏನಂದರೆ ಉದರಾಗ್ನಿ ಮಂದಾಗ್ನಿ ಶೋಕಾಗ್ನಿ ಕಾಮಾಗ್ನಿ ಜ್ಞಾನಾಗ್ನಿ ಈ ಮಧ್ಯದಲ್ಲಿ ಜೀವನು ಕುಳಿತುಕೊಂಡು ಯೋವಾಗ್ಯೂ ಪರಮಾ ತ್ಮನಂ ಕುರಿತು ತಪಾಸುಮಾಡುವನು. ಅಂದರೆ ವಿಚಾರಮಾಡು ವನು. ಇವನೇ ಮುನೀಶ್ವರನು. ಈ ಮನು ಮುನೀಶ್ವರರು ತ್ರೈತಾಯುಗದವರು. ಕಲ್ಪಿತದಿಂ ಕಾಮಧೇನು ಕಲ್ಪವೃಕ್ಷ ಚಿಂತಾಮಣಿ ಪರುಷ ಅಣಿಮಾದ್ಯಷ್ಟ ಸಿದ್ಧಿಗಳಿಂದಿರು ವವರು ದೇವತರು. ಇವರು ದ್ವಾಪರದಲ್ಲಿರುವವರು. ಈ ದೇ ವತರ ದ್ರಿಷ್ಟಿಯು ಅನಿಮಿಷ ದ್ರಿಷ್ಟಿಯು ಪೂರ್ಣಮುಚ್ಚದೆ ಪೂರ್ಣ ತೆಗಿಯದೆ ಅರೆಗಣ್ಣಿನಿಂದಿರುವರು. ಅಂದರೆ ಕತ್ತಲು ಬೆಳಕಿಗು ಸತ್ಯ ಅಸತ್ಯಕ್ಕು ಮಧ್ಯ ಸಾಕ್ಷಿಸ್ವರೂಪವಾದ

ಷ್ಟಿ ಇಂದಿರುವರು ಜಾಗ್ರಸುಷುಪ್ತಿಗು ಮಧ್ಯ ಇರುವ ಸ್ವಪ್ನ ಪ್ರಾಯದಂತೆ ಪ್ರಪಂಚವನ್ನ ತಿಳಿದಿರುವರು. ಭ್ರೂಮಧ್ಯದ ಆಗ್ನೇಯ ಅಂದರೆ ದೇಹ ಜೀವದ ಮಸ್ಯ ಅಂದರೆ ಜ್ಞಾನಾಗ್ನಿ ನಾನೆಂಬ ಅಹಂಕಾರವುಳ್ಳವರೇ ಕಲಿಯುಗದವರು. ಇವರಿಗೆ ಕರ್ಮವೇ ಗೃಹವಾಗಿರುವದು. ಕರ್ಮವೇ ಕಾಲನ ಆಧೀನದಲ್ಲಿ ರುವದು. ಕರ್ಮರಹಿತನಾಗಿ ದಿವಸಗಳಂ ಕಳೆಯುವ ದೇವತರಿಗೆ ಜನನ ಮರಣಗಳಿಲ್ಲಾ. ಕಾಮವಂ ಕಳೆಯುವನಿಗೆ ವ್ಯವಹಾರಗಳಿಲ್ಲಾ. ಕರ್ಮವಂ ಮಾಡದವನಿಗೆ ಗೃಹವೆಲ್ಲಿಯದು. ಘಟವೆಲ್ಲಿಯದು. ಘಟವಿಲ್ಲದವಗೆ ಕತ್ತಲು ಬೆಳಕುಗಳಿಲ್ಲಾ. ಇವಿಲ್ಲದವನಿಗೆ ಸೂರ್ಯಚಂದ್ರರಿಲ್ಲಾ. ಇವಿಲ್ಲದವನಿಗೆ ದಿಕ್ಕು ವಿದಿಕ್ಕುಗಳಿಲ್ಲಾ. ಕಾಮಧೇನು ಕಲ್ಪವೃಕ್ಷ ವಿರುವದೇವತರು ವಿಷವಂ ಸುಟ್ಟು ಅಮೃತವಂ ಶೇವಿಸುವರು. ಸತ್ಯವಂತರು ಸತ್ಯಲೋಕದಲ್ಲಿರುವರು. ಅಮೃತವಂ ಕುಡಿದು, ವಿಷವಂ ಕಾರುವರು. ಮರ್ತ್ಯಲೋಕದಲ್ಲಿ ಮೃತ್ಯುವಿಗೆ ತುತ್ತಾಗಿಹರು. ಅಂದರೆ ಉಪಕಾರ ಮಾಡಿದವರಿಗೆ ಅಪಕಾರಮಾಡುವರು. ಉಪಕಾರ ಅಪಕಾರ ವೆರಡೂ ಇಲ್ಲದೇ ಸುಖದುಃಖಗಳನ್ನು ಯಣಿಸದೆ ವಿಷವಮೃತವನ್ನು ಸಮನಾಗಿ ಕಂಡು ಸುಟ್ಟುಬಿಡುವದೇ ಜ್ಞಾನವು. ಇದೇ ಭಸ್ಮ ರುದ್ರನ ಅಕ್ಷಿ, ರುದ್ರಾಕ್ಷಿ ಈ ಎರಡು ವರ್ಣಗಳು ಬಂದವು.

ಪ್ರತ್ಯ. ೯ನೆ .ಅಧಿಕರಣ ೧೨ನೆ ಅ.



| | | | |
|---|---|---|---|
| ವಿಶೇಷಾಕ್ಷರಗಳು. | ಕ ಖ ಗ ಘ ....ಙ | | ಓಂ. |
| | ಚ ಛ ಜ ಝ ....ಞ | | ಅ ಉ ಮ |
| | ಟ ಠ ಡ ಢ ಣ ....ಅ | | ನ ಮ ಶಿ ವ ಯ |
| | ಅ ಆ ಇ ಈ ....ಉ | | ಓಂ. |
| | ಊ ಋ ೠ ಌ ೡ | ಪಂಚಾಕ್ಷರಗಳು. | ಧ್ಯಾನ ಜ್ಞಾನ ಮೌನ ಒಂದುಸೊನ್ನೆಗುರ್ತು. ನಡಿಯುವದು ಕೊಡುವದು ನುಡಿಯುವದು ನೋಡುವದು ಕೇಳುವದು ಮೂಸುವದು ಎರಡು ಸೊನ್ನೆ ಅಂದರೆ ಎರಡೆರಡು ಗೋಳಕಗಳು ಕಣ್ಣುಗಳು ನಾಲಿಗೆಗಳು ಕಿವಿಗಳು ಕೈಮೂಗುಕಾಲುಗಳು ಎರಡು ಸೊನ್ನೆಯ ಗುರ್ತು. ಒಂದಾದವನಿಗೆ ಎಂದೆಂದಿಗೂ ಮೋಕ್ಷವಿಲ್ಲ. ಎರಡಕ್ಕೆಲ್ಲಿಯದು. |
| | ಎ ಐ ಒ ಔ ....ಂ | | |
| | ತ ಥ ದ ಧ ....ನ | | |
| | ಪ ಫ ಬ ಭ ....ಮ | | |
| | ಯ ರ ಲ ವ ....ಶಿ | | |
| | ಷ ಸ ಹ ಳ ....ವ | | |
| | ಯ | | |

ಸಾಕಾರವೇ.......ನಿರಾಕಾರ, ನಾದವೆ ನಿರಾಕಾರವೆ

ನಮ......................ಮನ...............ಮನ..........

ಶ್ರೀವಣಾರಾಧ್ಯರು ಮಾಡುವ ಉಪದೇಶ.

ಸಕಾರನವು (ನವು) ಸಾಕಾರ ನಿರಾಕಾರಕ್ಕೆ ಸಾಕ್ಷಿಯೇ ಜ್ಞಾನ. ಪ್ರಜ್ಞಾನಂ ಬ್ರಹ್ಮಜ್ಞಾನಾನ್ಮೋಕ್ಷಃ ಅಜ್ಞಾನ ಪರಂ ಪರೆಯನ್ನು ಬಿಟ್ಟು ಬಿಡುವದೇ ಶೇಷ. ಅವಿದ್ಯಾ ನಾಶೋ ಆತ್ಮಶೇಷಃ.

| | | |
|---|---|---|
| ಏಕು | ೧ | ಸ ಸಾ ಸಿ ಸೀ ಸು ಸೂ ಸೆ ಸೈ ಸೊ ಸೌ ಸಂ ಸಃ |
| ದಾಹಂ | ೨ | ಸ ಸಿ ಸು ಸೆ ಸೊ ಂ |
| ಶತು | ೩ | ಸಾ ಸೀ ಸೂ ಸೇ ಸೈ ಸೌ ಃ |
| ಸಾವಿರ | ೪ | ಸಾ ಸೂ |
| ದಸ್ಸಾವಿರ | ೧ | ಸೀ ಸೆ |
| ಲಕ್ಷ್ಯ | ೬ | ೦ ನಿರ್ವಾಣಿ / ೫ ವಾಣಿ — ಸಾಲಿಗೆ ಮೂರು ಕಣ್ಣುಗಳುಳ್ಳವನೆ ಪರಮಾತ್ಮ. |

೬-ನೇ ಲಕ್ಷ ಇವರಲ್ಲಿ ಲಕ್ಷ್ಯ ಸುಮ್ಮನಿದ್ದರೆ ಸುಮ್ಮನಿರುವನು. ಮಾತನಾಡಿದರೆ ಮಾತನಾಡಿದಂತೆ ಮಾತನಾಡುವ

ಸು. ಪರ್ವತ ಶಬ್ದದಂತೆ ಕಲ್ಲುಗುಡಿಯಂತೆ ಘಂಟೆಯ ನಾಲಿಗಿಯಂತೆ ಚರ್ಮದ ಧ್ವನಿಯಂತೆ ವೀಣೆಯ ನಾದದಂತೆ

| | | |
|---|---|---|
| ೦ | ೦ | ೦ |
| ಜಾಗ್ರ | ಸ್ವಪ್ನ | ಸುಷುಪ್ತಿ. |
| ನೇತ್ರ | ಕಂಠ | ಹೃದಯ. |
| ಸ್ಥಾನ | ಸ್ಥಾನ | ಸ್ಥಾನ. |
| ಸಾಕಾರ | ಜ್ಞಾನ | ನಿರಾಕಾರ. |

**ಮೂರು ಅಕ್ಷಿಗಳು.**

ಕಾಶಿ ವಿಶಾಲಾಕ್ಷಿ, ಕಂಚಿ ಕಾಮಾಕ್ಷಿ, ಮಧುರೆ ಮೀನಾಕ್ಷಿ ಅಂದರೆ ಆಕಾಶದಲ್ಲಿ ವಿಶಾಲಾಕ್ಷಿ ಅಂದರೆ ಚಿದಾಕಾಶ ಚಿತ್ಸೂರ್ಯ ಮಧುರದಲ್ಲಿ ಮನಾಕ್ಷಿ ಅಂದರೆ ಅಮೃತದಲ್ಲಿ ಮನದ ಲಕ್ಷ್ಯ ಮನಸ್ಸಿಗೆ ಚಂದ್ರ ಅಧಿದೇವತೆಯಾದ್ದರಿಂದ ಅಮೃತ ಕುಂಡವೆ ಚಂದ್ರ ಕ್ಷಣಕ್ಕೊಮ್ಮೆ ಚಿಗುರುವ ಮನವೆಂಬ ಚಿಗುರೆಯನ್ನು ಹೊರಕ್ಕೆ ಬಿಡದೆ ತನ್ನ ಗರ್ಭದಲ್ಲಿಟ್ಟುಕೊಂಡಿರುವನು ಚಂದ್ರನು ಕಂಚಿ ಕಾಮಾಕ್ಷಿ ಅಂದರೆ ಈವಳಗಾಗಿ ಕಂಚಿಗೆ ಬುದ್ಧಿಯಿಂದು ನುಡಿಯುವುವದಕ್ಕೆ ವಾಕ್‌ಸ್ಥಾನ ಶಬ್ದ ಈ ಶಬ್ದವನ್ನು ಕೇಳಬೇಕೆಂಬ ಲಕ್ಷ್ಯ ಇದೆ ಜ್ಞಾನಾಗ್ನಿ ಇವು ಮೂರು ಕಣ್ಣುಗಳು ಮೂರು ಕ್ಷೇತ್ರಗಳಲ್ಲಿರುವವು.

ಜ್ಞಾನದ ಒಂದುಮೂಲೆಯಲ್ಲಿ ಒಂದುಜಾತಿಯನ್ನು ಹಿಡಿದು ಹುಟ್ಟಿರುವದು. ಪಂಡಿತ ಶಬ್ದವು ಇದರಲ್ಲಿ ಅಭ್ಯಾಸಿಸಿದವರೇ ಶಾಸ್ತ್ರಿಗಳು. ಇವರಲ್ಲಿ ಹುಟ್ಟಿರುವದೇ ಕರ್ಮೋಪಾಸನೆ. ಈ ಕರ್ಮೋಪಾಸನೆಯೇ ಕಾಲನ ಅಧೀನವಾದ್ದು ಅನಂತಜಾತಿಗಳು

ಜ್ಞಾನದ ಕಲ್ಪಿತಗಳು ಈಜ್ಞಾನವೆಂಥಾದ್ದು ಪ್ರಜ್ಞೆಯುಳ್ಳದ್ದು ಪ್ರಜ್ಞೆಯಂದರೇನು ಪ್ರತಿಯೊಂದರಲ್ಲಿರುವ ಚೈತನ್ಯ, ಚೈತನ್ಯ ವಂದರೇನು ಚಿತ್ತಚಿತ್ತವಂದರೇನು ಅದರದರ ಧರ್ಮವರಿವುದು ಅದರದರ ಧರ್ಮವಂದರೇನು ಏನೊಂದಿಲ್ಲದೆ ಯಲ್ಲಾ ಕಳದು ಳಿಯುವದೇ ಯಾವಾಗ್ಯೂ ಇರುವದು. ಅಂದರೆ ಇಲ್ಲದ್ದೇ ಇರುವದಾಯಿತು. ಇರುವದೇ ಕಾಣುವದಾಯಿತು. ಇದರಲ್ಲಿ ಅನಂತ ಕಲ್ಪಿತವಾಯಿತು. ಇದರಿದರ ಪರಿಣಾಮ ಗುಣಗಳೇ ಅದರದರ ಧರ್ಮ ಇದಂ ತಿಳಿದಾಚರಿಸುವನೇ ಸಾಕ್ಷಿರೂಪು ಚಿನ್ಮಯ. ಈ ಆತ್ಮಶೇಷನಿಂದ ಹುಟ್ಟದ ವಿಷವೇ ಪ್ರಪಂಚವಾಯಿತು. ಈ ವಿಷವನ್ನು ನುಂಗಿದರೆ ಪ್ರಪಂಚನಾಶವಾಗುವದು. ಬಿಟ್ಟರೆ ಪ್ರಪಂಚವನ್ನು ಸುಟ್ಟುಬಿಡುವದು. ಕಂಠದಲ್ಲಿ ಧರಿಸಿದರೆ ಪ್ರಪಂಚವು ಸ್ವಪ್ನಪ್ರಾಯವಾಗುವದೆಂದು ವಿಷವನ್ನು ಕಂಠದಲ್ಲಿ ಧರಿಸಿದನು. ಪರಮಾತ್ಮ ಆತ್ಮಶೇಷನನ್ನು ನುಂಗಿದರೇ ಹೃದಯವಂ ಶೇರಿ ಸುಷುಪ್ತಿಯಾಗಿ ಪ್ರಪಂಚವು ಲಯವಂ ಹೊಂದುವದು ಬಿಟ್ಟರೆ ಜ್ಞಾನ ಚಕ್ಷುವಿನಲ್ಲಿ ಶೇರಿ ಜ್ಞಾನಾಗ್ನಿಯಿಂದ ಪ್ರಪಂಚವು ಸುಟ್ಟುಹೋಗುವದು. ಇದನ್ನು ಕಂಠದಲ್ಲಿ ಧರಿಸಿದ್ದರಿಂದ ಸುಡದೆ ಲಯವಾಗದೆ ಪ್ರಪಂಚವು ಸ್ವಪ್ನಪ್ರಾಯವಾಯಿತು. ಈ ಪ್ರಪಂಚವು ಸುಡದೆ ಲಯವಾಗದೆ ಸ್ವಪ್ನವಾಗಿರುವದು. ಪದ್ಯ॥ ಗರಳವಾಶೇವೀಸಿ। ಮರಣಾವಗೆಲಿದನೇ ದೇವರದೇವಾ ॥ ಈ ಶೇಷನು ತಲೆಯನ್ನು ತಗ್ಗಿಸಿದರೇ ನರಗುರಿಯಾಗುವದು. ತಲೆಮೇಲಕ್ಕೆತ್ತಿದರೆ ವಂಟಿಯಾಗುವದು. ಅಂದರೆ ಒಬ್ಬನೇ ಆಗುವನು. ಈ ಶೇಷನಿಗೆ ಮೈಯಲ್ಲಾ ಕಣ್ಣುಗಳಾಗಿರುವವು. ಯಾವಂದರೆ ಕೇಳಿ ನೋಡಿದಕಣ್ಣು, ಹೇಳಿ

ನೋಡಿದ ಕಣ್ಣು, ಮುಚ್ಚಿನೋಡಿದ ಕಣ್ಣು, ಹೆಜ್ಜೆಇಟ್ಟುನೋಡಿದ ಕಣ್ಣು, ಮೂಶಿನೋಡಿದಕಣ್ಣು, ಇವೆ ಮೊದಲಾದ ಅನಂತ ಕಣ್ಣುಗಳು ರೋಮಕೂಪಗಳಲ್ಲಿರುವವು. ಈ ಕಣ್ಣುಗಳೇ ಅರಸಿಗೆ ನಕ್ಷತ್ರಮಂಡಲವಾಗಿರುವದು ಈನಕ್ಷತ್ರಗಳು ಕೃಷ್ಣಪಕ್ಷ ಅಮವಾಸಿಗಳಲ್ಲಿ ವಿಶೇಷವಾಗಿ ಕಾಣಿಸಿಕೊಂಡು ಶುಕ್ಲಪಕ್ಷ ಪೌರ್ಣೀಮಿ ಕಾಲಗಳಲ್ಲಿ ಏನೊಂದು ಕಾಣಿಸಿ ಕೊಳ್ಳದೆಯು ಇರುವವು. ಅಂದರೆ ಅಜ್ಞಾನ ಕಾಲದಲ್ಲಿ ಇವುಗಳ ಸುಖ ದುಃಖಗಳ ಭಾಸವಾಗುವದರಿಂದ ವಿಶೇಷವಾಗಿಯು ಜ್ಞಾನಕಾಲದಲ್ಲಿ ಇವುಗಳ ಸುಖ ದುಃಖಾ ಭಾಸವಾಗುವದರಿಂದ ನಿಶ್ಶೇಷವಾಗಿಯು ಇರುವವು ಅಲ್ಲದೆ ಈ ಮನುಷ್ಯಜಾತಿಯೇ ಬುಡಮೇಲಾದ ವೃಕ್ಷಜಾತಿಯಾಗಿರುವದು. ಹ್ಯಾಗಂದರೇ ಬುಡಕ್ಕೆ ನೀರುಗೊಬ್ಬರ ಹಾಕುವಂತೆ ಮನುಷ್ಯನ ಬಾಯೆಂಬ ಬುಡದಲ್ಲಿ ನೀರು ಅನ್ನ ಹಾಕುತ್ತಾರೆ. ವಟವೃಕ್ಷದಂತೆ ಬಿಳಲು ಬಿದ್ದ ಬಿದ್ದಲ್ಲೆಲ್ಲ ವೃಕ್ಷವೇ ಆದಂತೆ ಮನುಷ್ಯನ ಇಂದ್ರಿಯು ಬಿದ್ದಬಿದ್ದಲ್ಲೆಲ್ಲ ಪ್ರಾಣಿಗಳೇ ಆಗುವವು. ಆದ್ದರಿಂದ ಪ್ರಪಂಚವು ಇಂದ್ರಿಜಾಲವಾಯಿತು. ಇನ್ನು ಕ್ರಿಷ್ಣನಿಗೆ ವಟಪತ್ರಶಯನನೆಂದು ಹೇಳುತ್ತಾರೆ. ಈ ಪುರುಷೋತ್ತಮನಾದ ಈ ವಿಷ್ಣುವಿಗೆ ಆರುದಳಗಳಿರುವವು. ಯಾವಂದರೇ—ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ಸರ ಈ ದಳಗಳಮ್ಯಾಲೆ ಶಯನಮಾಡಿರುವನು. ವಿಷ್ಣುವಿನ ಚಕ್ರಬಿಟ್ಟರೆ ತಲೆ ತೆಗದುಕೊಂಡು ಬರುವದು. ಕಾಮ ಕ್ರೋಧ ಲೋಭ ಮೋಹಮದ, ಮತ್ಸರ ಈ ಚಕ್ರಗಳ ಬಿಟ್ಟರೆ ತಲೆ ತೆಗದುಕೊಂಡು ಬರುವವು. ಈ ವೃಕ್ಷಕ್ಕೆ ಅಹಂಕಾರ ಮಮಕಾರವೆಂಬ ಬಳ್ಳಿಹಬ್ಬಿಕೊಂಡಿರುವದು. ಮತ್ತು ಈವೃಕ್ಷ

ಕ್ಕೆ ಪ್ರಣವುಗಳೆಂಬ ದಳಗಳು ಅಯ್ವತ್ತು ಇರುವವು. ವೃಕ್ಷವು ಊಷ್ಣತ್ವದಿಂದ ಎಲೆಗಳು ಉದರಿದಂತೆ ಈಮನುಷ್ಯನಲ್ಲಿರುವ ದಳಗಳೆಂಬ ಪ್ರಣಮುಗಳು ತಾಪದಿಂದ ಉದರಿಬೀಳುವವು. ಒಂದು ದಿನಕ್ಕೆ ಎಷ್ಟೋ ಬೀಳುವವು. ಕಲ್ಪಿತದಿಂದ ಚಿಗುರುವವು. ಶಾಂತಸ್ವರೂಪದಿಂದ ಮೌನಿಯಾಗಿದ್ದರೆ ದಳಗಳೆಂಬ ಪ್ರಣವುಗಳು ಉದರಲಿಕ್ಕೆ ಆಸ್ಪದವಿಲ್ಲಾ. ಇದಕ್ಕೇನೆ ಉಲು ಅಡಿಗಿದ ವೃಕ್ಷದಂತೆ ಯಂಬುವದು. ಕಾಷ್ಟ ಸುಟ್ಟು ಇದ್ದಲಿ ಆದಹಾಗೆ ತಪೋದಂಡನೆಯಿಂದ ದೇಹವು ನಿಗ್ರುಹವಾಗಿ ಆತ್ಮನಿಗೆ ಪ್ರಪಂಚ ವುಳಿದಿದ್ದಲ್ಲಿ ಆ ಇದ್ದಲಿ ಅಗ್ನಿಸಂಗವಾದ ಹಾಗೇ ಆತ್ಮನು ಹುಟ್ಟಬರುವನು. ಇದ್ದಲಿ ಅಗ್ನಿಯಿಂದ ಸುಟ್ಟು ಬೂದಿಯಾದ ಬಳಿಕ ಅಗ್ನಿಯಾಗಲಿಲ್ಲಾ. ಆತ್ಮಗೆ ಪ್ರಪಂಚ ನಷ್ಟವಾದಲ್ಲಿ ಆತ್ಮನು ಹುಟ್ಟ ಬರಲಿಲ್ಲಾ.

## ಷಣ್ಮುಖ ದರ್ಶನ ಎಂಥಾದ್ದಂದರೇ.

ಸದ್ಗುರುವಿನ ಕಟಾಕ್ಷದಿಂದ ಮಾಂಸ ಪಿಂಡವನ್ನಳಿದು ಮಂತ್ರಪಿಂಡವಾದ ಪರಮಹಂಸನ ನಾಶಿಕಾಗ್ರುದಲ್ಲಿ ಶೇಷ ಅನ್ನುವ ಎರಡುಪ್ರಣವುಗಳು ಇರುವವು. ಈ ಶೇಷನು ವಾಯುವನ್ನು ಸ್ವೀಕರಿಸುತ್ತಿರುವನು. ಈ ಪರಮಹಂಸನ ನೇತ್ರುಗಳ್ಯರಡರಲ್ಲಿ ಹಂಸವೆಂತ ಪ್ರಣವುಗಳಿರುವವು. ಈ ಹಂಸನು ಶೇಷನನ್ನು ಕಚ್ಚಿ ಕೊಂಡಿರುವನು. ಮತ್ತು ಪಂಚಭೂತಾತ್ಮಕವಾದ ಪೀತ ಶ್ವೇತ ಹರಿತ ಮಾಂಜಿಷ್ಟ ಕಪೋತವೆಂಬ ಪಂಚವರ್ಣದ ಪರಮಹಂಸನ ಮ್ಯಾಲೆ ಅಂದರೇ ಭ್ರೂಮಧ್ಯ ನೇತ್ರುಮಧ್ಯದಲ್ಲಿ ಓಂಕಾರ ಪ್ರಣವುವು ಇರುವದು. ಈ ಓಂಕಾರಕ್ಕೆ ಷಣ್ಮುಖನೆಂತ ಹೆಸರು ಈ ಷಣ್ಮುಖನ ಉತ್ಪನವು ಕೃತ್ತಿಕೆ ನಕ್ಷತ್ರುದಲ್ಲಿ

ಆಗುವದು. ಈ ಲೋಚನೆಗೆಳೆರಡು, ಆ ಲೋಚನೆ ಒಂದು, ಈ ಮೂರು ಕೂಡುವಲ್ಲಿ ಕೃತ್ತಿಕೆಯಾಗುವದು. ಸೂರ್ಯ, ಚಂದ್ರ, ಅಗ್ನಿ ಈ ಮೂರರ ಕೂಡುವಿಕೆಯೇ ಕೃತ್ತಿಕೋತ್ಸವವು. ಅಂದರೆ ಬಾಹ್ಯವು ಅಂತರದಲ್ಲಿ ಶೇರಿ ಅಂತರವು ಜ್ಞಾನಾಗ್ನಿಯಲ್ಲಿ ಶೇರಿದ ಸುಖವೇ ಷಣ್ಮುಖ ದರ್ಶನ,

ಪ್ರ. ದ್ವಿ. 6 ನೆ ಅಧಿಕರಣ.

**ಮತ್ತೊಂದುವಿಧ ಷಣ್ಮುಖ ದರ್ಶನವೆಂಥಾದ್ದೆಂದರೇ.**

ಭ್ರೂಮಧ್ಯದಲ್ಲಿರುವ ಷಣ್ಮುಖ ದರ್ಶನ ಮಾಡಿಕೊಳ್ಳಬೇಕಾದರೆ ಸಪ್ತಸೋಪಾನಗಳನ್ನು ಹತ್ತಬೇಕಾಗುವದು. ಇವುಗಳನ್ನು ಹತ್ತಬೇಕಾದರೆ ಕಣ್ಣುಗಳು ತಿರುಗುವವು. ಹ್ಯಾಗಂದರೆ ಅಧೋಗತಿಯಲ್ಲಿರುವ ಪ್ರಪಂಚವು ದೂರವಾಗಿ ಕಾಣುವದರಿಂದಲು, ಪರಮಾರ್ಥದ ಕಡಿಗೆ ಲಕ್ಷ್ಯವಿಟ್ಟರುವದರಿಂದಲು ಪ್ರಪಂಚದ ಕಡಿಗೆ ಬಿಟ್ಟು ಬ್ರಹ್ಮದ ಕಡಿಗೆ ತಿರುಗುವವು. ಅಧೋಭಾಗದಲ್ಲಿರುವ ಪ್ರಪಂಚಕ್ಕೆ ಬೀಳಬಾರದೆಂಬ ಭಯವನ್ನು ಮನಸ್ಸಿನಲ್ಲಿ ಪೂರ್ಣವಾಗಿಟ್ಟುಕೊಂಡು ಆತ್ತಕಡಿಗೆ ನೋಡದೆ ನಿರ್ಭೀತಿಯಿಂದ ಹತ್ತಿ ಷಣ್ಮುಖನ ದರ್ಶನ ಮಾಡಿಕೊಂಡಾತನು ಸಚ್ಚಿದಾನಂದ ಸುಖಸ್ವರೂಪನೆ ತಾನಾಗುವನು. ಪ್ರಜ್ಞಾನಂ ಬ್ರಹ್ಮ ಇಜ್ಞಾನ ಚಕ್ಷುವಿನಲ್ಲಿ ಬಂದ ಬ್ರಹ್ಮಬೀಜವೆ ಉತ್ಪತ್ತಿಗೆ ಕಾರಣವಾಗಿರುವದು. ಪಂಚವರ್ನದ ಪಂಚಭೂತಾತ್ಮಕವಾದ ಪರಮಹಂಸನ ಈ ಚಕ್ಷುವಿನಲ್ಲಿಬಂದ ಬ್ರಹ್ಮಬೀಜದಿಂದ ಜಗದುತ್ಪತ್ತಿಯಾದಂತೆ ಪಂಚವರ್ನದ ಮಯೂರ ಪಕ್ಷಿಯ ಕಣ್ಣಿನ ಬಿಂದುವಿನಿಂದ ಗರ್ಭೋತ್ಪತ್ತಿಯಾಯಿತು. ಬ್ರಹ್ಮಬೀಜ ಮಿದಂ ಜಗತ್, ದೃಗ್ ದೃಶ್ಯದಂತೆ ಕಾಗದ ಅಕ್ಷರದಂತೇ.

## ಸಪ್ತಸೋಪಾನಗಳ್ಯಾವಂದರೇ.

ನಾನೀನೆಂಬುವದಳಿದು ಯಲ್ಲ ಘಟಗಳೊಂದೆಂಬುವದೇ ವಂದನೆ ಸೋಪಾನ ನಾನೆಚ್ಚು ತಾನೆಚ್ಚುಂಬುವದಿಲ್ಲದೆ ಯಲ್ಲ ಜೀವಿಗಳೊಂದೆಂಬುವದೆ ಎರಡನೆ ಸೋಪಾನ. ಶತೃ ಮಿತ್ರತ್ವ ಸುಖದುಃಖ ವಿಷಮೃತ ಸಮಾನವಾಗಿ ಕಾಣುವದು. ಮೂರ ನೇ ಸೋಪಾನ ಹೀಗೆ ಕಂಡು ನಿರ್ಭೀತಿಯಿಂದಿರುವದೆ ನಾಲ್ಕನೆ ಸೋಪಾನ. ಹೀಗೆ ತಿಳಿದು ಸ್ನೇಹವಂ ಬೆಳಸುವದೇ ಐದನೇ ಸೋಪಾನ. ಸ್ನೇಹವಂ ಬೆಳಸಿ ಎರಡೊಂದಾಗುವದೇ ಆರನೇ ಸೋಪಾನ. ಒಂದಲ್ಲದೆ ಎರಡರ ಜ್ಞಪ್ತಿ ಇಲ್ಲದುದೇ ಏಳನೇ ಸೋಪಾನ. ಈ ಸಪ್ತಸೋಪಾನಗಳನ್ನು ಹತ್ತಿದವನಿಗೆ ಪ್ರಪಂಚದ ಕಡಿಗೆ ಬಿಟ್ಟು ಪರ ವಸ್ತುವಿನ ಕಡಿಗೆ ಕಣ್ಣುಗಳು ತಿರುಗುವವು. ಇಂಥಾವನನ್ನು ಮೋಕ್ಷಾಂಗನೆಯು" ಕರಗ್ರಹಣ ಮಾಡಿಕೊಳ್ಳುವಳು.

## ಚಿದ್ರುದ್ರಾಕ್ಷಿಗಳ ವಿವರ.

ಒಂದು ಮುಖದ ರುದ್ರಾಕ್ಷಿಯೇ ಸರ್ವಸಮತ್ವವೆಂಬ ಜ್ಞಾನ ಚಕ್ಷು ಎರಡು ಮುಖದ ರುದ್ರಾಕ್ಷಿಯೇ ಬಾಹ್ಯಾಂತರ ಸೂರ್ಯ ಚಂದ್ರ ನೇತ್ರಗಳು ಮೂರು ಮುಖದ ರುದ್ರಾಕ್ಷಿಯೇ ತನುತ್ರಯ ನಾಲ್ಕು ಮುಖದ ರುದ್ರಾಕ್ಷಿಯೇ ಚತುಃಕರಣಗಳು (ಅಂತಃಕರಣಗಳು) ಐದು ಮುಖದ್ದು ಕರ್ಮೇಂದ್ರಿಯಗಳು ಆರು ಮುಖದ್ದು ಕಾಮಾದಿ ಗುಣಗಳು ಏಳು ಮುಖದ್ದು ಸಪ್ತ ವ್ಯಸನಗಳು ಎಂಟುಮುಖದ್ದು ಅಷ್ಟಮದಗಳು ಇದರಂತೆ ಮುಂದಿನ ಮುಖಗಳ ಅರಿತುಕೊಳ್ಳಬೇಕು. ಈ ಇಂದ್ರಿಯಗಳು ದುರ್ಭಾವದಲ್ಲಿ ವರ್ತಿಸಿದ್ದೇ ಭೂತರುದ್ರಾಕ್ಷಿಗಳು.

ಸದ್ಭಾವದಲ್ಲಿ ವರ್ತಿಸಿದ್ದೇ ಭದ್ರಾಕ್ಷಿಗಳು. ಇಂದ್ರಿಯಗಳೆಲ್ಲ ಆತ್ಮನಲ್ಲಿ ಶೇರಿದ್ದಾದರೆ ಇದೇ ಗೌರಿ ಶಂಕರ ಚಿಪ್ಪುರುದ್ರಾಕ್ಷಿ. ಇದಕ್ಕೆ ಜ್ಞಾನಚಕ್ಷು ಏಕ ಮುಖದ ರುದ್ರಾಕ್ಷಿ. ಅಷ್ಟಾವರ್ಣಗಳ ನಿರ್ವಾಚ್ಯ ಶಿವರೂಪು ಶಕ್ತಿರೂಪಾದ ಕಾರಣ ಗುರುಶಬ್ದಕ್ಕೆ ನಿರ್ವಾಚ್ಯ ಸೃಷ್ಟಿ ಸ್ಥಿತಿ ಲಯ ಸ್ವರೂಪಾದ ಕಾರಣ ಲಿಂಗಶಬ್ದಕ್ಕೆ ನಿರ್ವಾಚ್ಯ ತ್ರ್ಯಮೂರ್ತಿ ಸ್ವರೂಪಾದ ಕಾರಣ ಜಂಗಮ ಶಬ್ದಕ್ಕೆ ನಿರ್ವಾಚ್ಯ ಸುಜ್ಞಾನ ದೋಷನಾಶನ ಜನ್ಮದಹನ ಕರ್ಮಚ್ಛೇದನದಿಂ ವುದಕ ಶಬ್ದಕ್ಕೆ ನಿರ್ವಾಚ್ಯ ಭಕ್ತಿ ಮುಕ್ತಿ ಪ್ರಸಾದ ಸ್ವರೂಪಾದಕಾರಣ ಶೇಷಶಬ್ದಕ್ಕೆ ನಿರ್ವಾಚ್ಯ ಶಿವರೂಪು ಶಕ್ತಿರೂಪು ತೇಜೋರೂಪಾದಕಾರಣ ಭೂತಿ ಶಬ್ದಕ್ಕೆ ನಿರ್ವಾಚ್ಯ. ನಾದ ಬಿಂದು ಕಳಾಶಿವ ಯುಂಬೀ ಚತುರ್ವಿಧ ಧಾತು ಶಬ್ದದಿಂ ರುದ್ರಾಕ್ಷಿ ಶಬ್ದಕ್ಕೆ ನಿರ್ವಾಚ್ಯ ಚಿತ್ಕಳಾ ಪುರಾಲಿ ಪ್ರಕಾಶ ಸುನಾದ ಸುಜ್ಞಾನದಿಂ ಮಂತ್ರ ಶಬ್ದಕ್ಕೆ ನಿರ್ವಾಚ್ಯ.

**ಕರ್ಮಿಗಳಿಗೂ ಜ್ಞಾನಿಗಳಿಗೂ ಒಂದೇ ಉತ್ತರ.**

ಬನ್ನಿ, ಬಿಲ್ವ, ತುಲಶಿ, ಅರಳಿ, ಬೇವು, ಉಣಚಿ, ಆಲ, ಬ್ಯಾಲ, ಕಾಮುಕಸ್ತೂರಿ, ಬಿದಿರು, ಬೆತ್ತರುದ್ರಾಕ್ಷಿ ಇನ್ನು ಅನೇಕವಾದ ಗಿಡಮರ ಬಳ್ಳಿಗಳು ಮನುಷ್ಯ ಜನ್ಮಕ್ಕಿಂತ ಶ್ರೇಷ್ಠವೆಂತಾದವು? ಗರುಡ, ಹಂಸ, ನವಿಲು, ಕಾಗಿ ಇನ್ನು ಅನೇಕವಾದ ಪಕ್ಷಿಗಳು ಮನುಷ್ಯ ಜನ್ಮಕ್ಕಿಂತ ಅಧಿಕವೆಂತಾದವು? ಗೋವು, ವೃಷಭ, ಹರಿಣ, ವ್ಯಾಘ್ರ, ಗಜ, ಸರ್ಪ, ಮೂಷಕ ತುರುಗ ಇನ್ನು ಅನೇಕವಾದ ಪ್ರಾಣಿಗಳು ಮನುಷ್ಯ ಜನ್ಮಕ್ಕಿಂತ ಪಾವನ ವೆಂತಾದಾವು? ಪಾರ್ಥೀವ ಸಮ್ಮಂದವಾದ ಶಿಲಾ ಲೋಹ ಕ್ಷೇತ್ರ ಇವುಗಳು ಮನುಷ್ಯ ಜನ್ಮಕ್ಕಿಂತ ಅಜಡವೆಂ

ತಾದೀವು? ತುಂಗ ಭದ್ರ ಕ್ರಿಷ್ಣ ಕಾವೇರಿ ಗಂಗ ಯಮುನ ಸ ರಸ್ವತಿ ಇನ್ನು ಅನೇಕವಾದ ತೀರ್ಥಗಳಿಂದ ಮನುಷ್ಯ ಜನ್ಮ ಪ ವಿತ್ರ ವೆಂತಾದೀತು? ವಿಜಯ ದಶಮಿ ಶಿವರಾತ್ರಿ ಶನಿ ತ್ರಯೋ ದಶಿ ಇನ್ನು ಅನೇಕವಾದ ತಿಥಿಗಳಿಗಿಂತ ಮನುಷ್ಯ ಜನ್ಮದ ಪು ಣ್ಯವೆಂತಾದೀತು? ಸೂರ್ಯ ಚಂದ್ರ ಅಗ್ನಿ ಇವುಗಳಿಗಿಂತ ಮನು ಷ್ಯಜನ್ಮ ಶಾಶ್ವಿತ ವೆಂತಾದೀತು? ಆತ್ಮಾರಾಮನ ಪತ್ನಿಯಾದ ಸೀತವು ಪತಿಯಾಜ್ಞೆಯಂ ಮೀರಿ ಸಪ್ತಪರಗಳೆಂಬ ಮೆದಡು ೧ ಮಜ್ಜಿ ೨ ಸ್ನಾಯು ೩ ಅಸ್ತಿ ೪ ಮಾಂಸ ೫ ಚರ್ಮ ೬ ರ ಕ್ತ ೭. ಈ ಸಪ್ತಧಾತುಗಳನ್ನು ದಾಂಟಿ, ದಶೇಂದ್ರಿಯಗ ಳೆಂಬ ರಾವನಿಗೆ ಧರ್ಮಮಾಡಿದಳು. ಇದರಿಂದ ತಾನು ಕೆಲವು ಕಾಲ ದುಃಖವನುಭವಿಸಿ ಧರ್ಮಮಾಡಿದ್ದರಿಂದ ಸುಖಸ್ವರೂಪ ಳಾದಳು. ಪತಿಯಾಜ್ಞೆಯಂನಡಸಿ ಪರಪುರುಷನಂ ಶೇರಿದಾಗ್ಯು ಸಿಂಧುಬಲ್ಲಾಳನ ಪತ್ನಿಯು ಪಾರ್ವತಿ ಯಾದಳು. ಆತ್ಮರಾಮ ಚಂದ್ರನಿಗೆ ಮನವೆಂಬ ಮಂತ್ರಿಯು ಮಂತ್ರರೂಪನಾಗಿಯು ಬುದ್ಧಿಯು ವಾಕ್ಸ್ಥಾನದಲ್ಲಿ ವಾಶಿಶಿ ಗುರುರೂಪನಾದ ವಶಿಷ್ಠ ನಾಗಿ ದಶದಿಕ್ಕುಗಳೆಂಬ ದಶನಾದಗಳಿಗೆ ರಾಜನಾಗಿ ಅದರದರ ಧರ್ಮದಿಂದ ರಾಜ್ಯಭಾರವಂ ಹೊತ್ತಿದಾಗ್ಯೂ ಚಿತ್ತವಿಶ್ರಾಂತಿ ಇಂದಿದ್ದನು. ಆತ್ಮರಾಮನು ರಾಜ್ಯಭಾರ ಮಾಡಿದಂತೆ ಈಗಲು ಮಹಾರಾಜನು ಆದರದರ ಧರ್ಮಗಳಿಗೆ ಲೋಪಬಾರದಂತೆ ರಾ ಜ್ಯಭಾರವಂ ಹೊತ್ತಿರುವನು. ಈತನೇ ಸಾಕ್ಷರೂಪನಾದ ಪರ ಮಾತ್ಮನು. ಯಚ್ಚರವೆ ಆದಿತ್ಯವಾರವೆಂದು ಈ ವಳಗಾಗಿ ಹೇ ಳಿದೆ ಯಷ್ಟೆ ಯಚ್ಚರ ವಾದರೆ ನೇತ್ರ ಕಮಲ ಅರಳುವದು ಆಲೋಚನೆಯೇ ಸೋಮವಾರ. ಆನಂದ ವಾದರೆ ಮುಖ ಕ

ಮಲ ಅರಳುವದು. ಅಂದರೆ ನಗುವನು. ಮನಸ್ಸು ಬಹಿರ್ಗತ ವಾದರೆ ನೇತ್ರಕಮಲವು ಅಂತರ್ಗತವಾದರೆ ಮುಖಕಮಲವು ಈ ಎರಡಕ್ಕು ಸಾಕ್ಷಿಯಾಗಿ ನಿಂತಲ್ಲಿ ಹೃದಯಕಮಲವು ಅರಳು ವದು. ಇದಕ್ಕೆ ಸ್ವಾನುಭವ ಈ ಶಾಸ್ತ್ರವನ್ನು ಓದಿ ತಿಳಿಯ ತ ಕ್ಕವರಿಗೆ ಯಾವಲ್ಲಿ ಶಂಕ ಉತ್ಪತ್ತಿಯಾಗುವದೋ ಅಂದರೆ ಶಂ ಕ ಅಂದರೆ ಶ್ರೋತ್ರ ಕೇಳಬೇಕೆಂಬುವ ಇಚ್ಛೆ. ಈ ಇಚ್ಛೆಯೆ ದ್ವೈತ ಜ್ಞಪ್ತಿ, ದ್ವೈತ ಜ್ಞಪ್ತಿಯೆ ದುಃಖಮಯವಾದ್ದು. ಕೇ ಳುವ ಶ್ರೋತ್ರಕ್ಕೆ ವಾಣಿ ಹೇಳುವವಾಕ್ ಸಮಾಧಾನ ಅಂ ದರೆ ಮಾತನಾಡದೆ ಮೌನದಿಂದಿರುವದೆ ನಿರ್ವಾಣಿ ಸಮಾಧಾನ. ಈ ಸಮಾಧಾನವೇ ಶಾಂತ. ಈತನೇ ಶಾಂತೇಶ್ವರ. ಈತನೇ ನುಡಿದಂತೆ ನುಡಿಯುವನು. ಇದೇ ವಾಕ್ಸಿದ್ಧಿಯು. ಇವನು ಅನಿಚ್ಛೆಯಿಂ ನುಡಿಯುವನು. ಮತ್ತು ಶಂಕವೆಂಬ ಮದಗಜ ಶ್ರೋತ್ರಕ್ಕೆ ಅಂಕುಶಪ್ರಾಯವಾಗಿರುವ ಬೀಗದ ಕೈ ಸದ್ಗುರುವಿ ನಲ್ಲಿರುವದು. ಸೂರ್ಯನೆಂಬ ಯಚ್ಚರವನ್ನ, ತಲೆಯೆಂಬ ರಾಹು ವು ಗ್ರಹಿಸಿದ ಕಾಲದಲ್ಲಿ ಮಂತ್ರಸಿದ್ಧಿಯಾಗುವದು. ಈ ಸೂರ್ಯ ನನ್ನು ಕೇತು ಗ್ರಹಿಸಿದರೇ ಮರಣ ಮೂರ್ಛಾದಿಗಳು ನಡಿಯು ವವು. ಚಂದ್ರನೆಂಬ ಆಲೋಚನಿಯನ್ನು ಕೇತುವು ಗ್ರಹಿಸಿದರೆ ಶೂನ್ಯವಾಗುವದು. ಶೂನ್ಯವೇ ಶೇಷನು ಶೇಷನೇ ಗ್ರಹಿಸುವ ನು. ಚಂದ್ರನನ್ನು ರಾಹುವು ಗ್ರಹಿಸಿದರೆ ಕ್ರೂರಗುಣಗಳುಹುಟ್ಟಿ ಲ ಯವಂ ಹೊಂದುವವು. ಚಂದ್ರಗ್ರಹಣದಿಂದ ಕೇವಲ ಅಶುಭ ವು. ಸೂರ್ಯಗ್ರಹಣದಿಂದ ಶುಭಾಶುಭವು. ಇವರ ಧರ್ಮವಾಗಿ ರುವದು.



ಏಕೋರಾಮಾರಾಧ್ಯರು ಮಾಡುವ ಉಪದೇಶ.



ಉತ್ತರ ಮುಖವಾಗಿರುವ ಶಾಂತಿ ವಿದ್ಯೆ ಪ್ರತಿಷ್ಠೆ ನಿವೃತ್ತಿ ಈ ೪ ಕಲೆಗಳಿಂ ಕೂಡಿದ ತತ್ಪುರುಷ ಮುಖದಿಂದು ಏಶಿವಯೇಕೋರಾಮಾರಾಧ್ಯನು ಆದಿಶಕ್ತಿಯಿಂದಾನಂದರೂಪ ನಾಗಿ ಶ್ರೀವೈರಾಗ್ಯ ಸಿಂಹಾಸನವೆಂದು ಉತ್ತರದಿಕ್ಕಿನಲ್ಲಿ ತಮ್ಮ ಸಿಂಹಾಸನದ ಗುರ್ತನ್ನು ಸ್ಥಾಪಿಸಿರುವರು. ವಿಷವಮೃತವಳಿದ ಪ್ರಸಾದಿಯಂ ಪರೀಕ್ಷಿಸಿ ಅನಾಹತ ಚಕ್ರವೆಂದರೆ ಜೀವಚಕ್ರವು ಯಾವಾಗ್ಯು ತಿರುಗುತ್ತಲಿರುವದು. ಇಂಥಾ ಚಕ್ರದಲ್ಲಿ ತಿರುಗಿ ವ್ಯಸನ ಪಡುವವರನ್ನು ಕಡೆಗೆ ತೆಗದು ಉಧ್ಧಾರಮಾಡಿದ್ದರಿಂ ದ ಜಗದ್ಗುರುವೆಂಬ ನಾಮವಂ ಪಡದು ಮಂತ್ರವರ್ಣದಿಂ ತೃಪ್ತಿಯಂ ಹೊಂದಿಸಿ ಕೃತಕೃತ್ಯನನ್ನಾಗಿ ಮಾಡುವನು. ಈ ಒಂ

ಡು ವರ್ಣವಂ ಅನುಗ್ರಹಿಸಿದ ಶಿಸುವಿಗೆ ಮನೋಲ್ಲಾಸವು ಪ್ರಾಪ್ತವಾಯಿತು. ಹ್ಯಾಗಂದರೇ ತೊಟ್ಟಲು ತೂಗುತ್ತಿದ್ದಾಗ್ಯೂ ಮಗುನೆಂತು ಚಲಿಸದಿರುವದೋ, ಸೂರ್ಯನ ರಥ ಎಷ್ಟುವೇಗವಾಗಿ ಹೋದರು ಸೂರ್ಯನು ಕುಳಿತೆ ಇರುವನೋ, ನೀರು ಎಷ್ಟು ಶೀಘ್ರವಾಗಿ ಹರಿದರು ಕೆಳಗಿರುವ ಬಂಡೆಯು ಯಂತು ಚಲಿಸದಿರುವದೋ ಹಾಗೆ ಸದ್ಗುರೋಪದೇಶವಂ ಪಡದವನ ಮನಸ್ಸು ಘಟ್ಟಿಯಾಗಿರುವಧು. ಸರ್ವವು ಬ್ರಹ್ಮವೆಂಬ ಜ್ಞಾನವೇ ಸಮಾಧಿಯಲ್ಲದೆ. ಇವನ ಮನವು ಎಲ್ಲೆಲ್ಲಿಗೆ ಹೋದರು ಅಲ್ಲಲ್ಲಿಯೇ ಸಮಾಧಿಯೆಂತ ಹೇಳಬೇಕು. ಮತ್ತು ವಂಧ್ಯಾಪುತ್ರನು ಗಗನ ಪುಷ್ಪದಿಂ ಅಲಂಕೃತವಾದ ಶಿರಉಳ್ಳವನಾಗಿ ಶಶಶೃಂಗಮಯವಾದ ಧನುವಂ ಧರಿಸಿಕೊಂಡು ರತ್ನಮಯವಾದ ಮೃಗಗಳ ಬ್ಯಾಂಟಿಗೆ ಪೋದನೆಂಬ ಮಾತು ಬಾಲಕರು ಸಹಜವೆಂಬಂತೆ ಕೇಳುತ್ತ ಆಡುವರು. ಇದೇ ಬಾಲಕರು ಕೆಲವು ದಿನಕ್ಕೆ ಸುಳ್ಳೆಂತ ಹ್ಯಾಗೆ ತಿಳಿಯುವರೋ ಹಾಗೇ ಪ್ರಪಂಚ ಸುಖವನ್ನು ಅಜ್ಞರು ಸ್ಥಿರವೆಂತಲು ಗುರೋಪದೇಶಾನಂತರ ಕ್ಷಣಭಂಗುರವೆಂತಲು ತಿಳಿಯುವರು. ಮತ್ತು ಚಿದ್ವಸ್ತುವಿನಲ್ಲಿ ದೃಷ್ಟಿ ಇಲ್ಲದವನ ಶರೀರವು ಉಸುರಾಡುವ ಹೆಣವಿನಂತೆಯೆಸರಿ. ಯಾವಾಗ ವಿಚಾರಬಲದಿಂ ಜಾಗ್ರವು ಸ್ವಪ್ನಪ್ರಾಯವಾಗುವದೋ ಆಗಲೆ ದೃಶ್ಯದಲ್ಲಿ ವೈರಸ್ಯ ಉಂಟಾಗುವದು. ಪದ್ಯ|| ತನುವೇನು ಮಾಡದು ಮನಮಾಡೊದಲ್ಲದೆ ಮನಸಿನ ಕಲ್ಪನೆ ಜಗವೆಲ್ಲ ಮನಸಾನು ತಡದಾರೆ ತ್ರಿಣೆಯನೀನಾಗುವಿ ತನಯನೆಕೇಳು ಸದ್ಗುರುವಾಕ್ಯ || ಮನವೇನು ಮಾಡದು. ಜ್ಞಾನವೆ ಮಾಡ್ಸೋದು. ಜ್ಞಾನದ ಲೀಲೆಯೆ ಜಗವೆಲ್ಲ ಜ್ಞಾನದ ಲೀಲೆಯೋ

ನಿಕೋರಾಮಾರಾಧ್ಯರು ಮಾಡುವ ಉಪದೇಶ.

ಜಗವೆಲ್ಲವಾದರೆ ಭಾವನಿರೋಧವು. ತನಯನೆ. ಹುಟ್ಟಿದ ಶಿಶು ನಿಗೆಮನಸಿನಲ್ಲಿ ಗುರ್ತಿಸುವದು ಬಂದಿತು. ಮನಸಂತ್ರಾಯತೆ ಯಸ್ಮತ್ತ್ರಸ್ಮನ್ಮಂತ್ರ ಮಿತಿಸ್ಮೃತಂ ಚಿತ್ರಪಟದಲ್ಲಿದ್ದ ಘೋರೆ ಬೊಂಬೆಗಳು ಯುದ್ಧವಂ ಮಾಡುವವೆ ಚಿತ್ರದಲ್ಲಿದ್ದ ಚಂದ್ರಕಿರಣಗಳಿಂ ವನೌಧಿಗಳು ಸಂತೋಷಪಡುವವೆ. ಶವಗಳು ಕುಣಿಯುವವೆ ಕಲ್ಲುಬೊಂಬೆಗಳು ಗಾನವಂ ಮಾಡುವವೆ ಯಾವದು ಹುಟ್ಟಿದ್ದು ಇರುವದು ಸಹ ಸುಳ್ಳೆನಿಸುವದೊ ಯಾವದು ಹುಡುಕಿದರು. ಶಿಕ್ಕದೊ ಅಂಥಾ ಸುಳ್ಳುಮನವು ಜಗವೆಲ್ಲಕ್ಕೂ ಕಾರಣವಾಗಿ ಜನಗಳಂ ಬಾಧಿಸುವಲ್ಲಿ ಅಜ್ಞಾನದ ಮಹಿಮೆಯನ್ನೆಂತು ಬಣ್ಣಿಸುವದು. ದೃಶ್ಯವಂ ಪ್ರತಿಬಿಂಬವೆಂದು ಗುರ್ತಿಸಿದಲ್ಲಿ ಚಿತ್ತವಿಶ್ರಾಂತಿ ಯಂಬ ಮಂತ್ರಸಿದ್ಧಿಯಾಯಿತು.

ಇಲ್ಲಿಗೆ ಏಳುವರ್ಣವಾದವು.

**ಬಲಮುರಿ ಶಂಖಿನ ಶ್ರೇಷ್ಟತೆ.**

ಎಂಥಾದ್ದೆಂದರೇ—ಬಲಮುರಿ ಶಂಖು ಅತಿಶ್ರೇಷ್ಟವೆಂತ ಇದು ಇದ್ದಲ್ಲಿ ಸುಖವುಂಟಾಗುತ್ತದೆಂತ ಹೆಚ್ಚು ದ್ರವ್ಯವನ್ನು ಕೊಟ್ಟು ತೆಗೆದುಕೊಳ್ಳುತ್ತಾರೆ. ಇಂಥಾ ಸುಖವನ್ನುಂಟುಮಾಡುವ ಶಂಕವನ್ನು ಕ್ರಯಕ್ಕೆ ಕೊಡುವದು ಹ್ಯಾಗಾಗುವದೆಂದರೆ ಹಸಿ ತೃಷಿಗಳನ್ನಡಗಿಸುವ ಔಷಧವನ್ನು ಕೊಡುವೆನು, ಸದ್ಯಕ್ಕೆ ದಾಹವು ಸಂಕಟವು ಪ್ರಾಪ್ತವಾಗಿದೆ. ಕೊಂಚ ವುದಕ ಪ್ರಸಾದವನ್ನು ಕೊಡಬೇಕೆಂತಲೂ, ಆವಿನ ಹೆಡೆಯಿಂದ ಕೆನ್ನೆ ತುರಿಶಿ ಕೊಂಬುವನಂತೆ ಕಂಬಳಿಯಲ್ಲಿ ಕಣುಕವ ನಾದುವನಂತೆ ವಜ್ರವಂ ಸೂಜಿಯಿಂ ರಂಧ್ರವನ್ನು ಮಾಡುವೆನೆಂಬ ಮೂರ್ಖ

ನ ಹಾಗೆ ಆಗುವದು. ಇದಕ್ಕೆ ಪರಿಹಾರವೇನಂದರೇ ಶಿರಶ್ಶಿಗೆ ಶಂಕು ಯಂತ ಹೆಸರು. ಶಿರಸ್ಸನ್ನು ಬಲಕ್ಕೆ ಬೊಗ್ಗಿಸಿದರೆ ಬಲ ಮುರಿ ಯಾಗುತ್ತದೆ. ಹೀಗೆ ಬಗ್ಗಿಸಿದರೆ ಚಂದ್ರಸ್ವರವು ಮತ್ತು ಯಡಕ್ಕೆ ಬಗ್ಗಿಸಿದರೆ ಸೂರ್ಯಸ್ವರವು ಬರುವದು. ಈ ಸೂರ್ಯ ಸ್ವ ರವಲ್ಲಿರುವ ಕಾಲದಲ್ಲಿ ಯಾರಾದರೂ ಕೆಟ್ಟಮಾತನ್ನು ಹೇಳಿದರೆ ಅತಿಕ್ರ್ಯಾರವಾದ ಹನ್ನೆರಡು ಕಳೆಯಂದರೆ ತಪನಿ ತಾಪನಿ ಮರೀ ಚಿ ಜ್ವಾಲಿನಿ ಇವೇ ಮುಂತಾದ ನಿಷ್ಟುರ ಸಮ್ಮಂಧವಾದ ಊ ಷ್ಣವನ್ನು ತೋರಿಸುವದು ಚಂದ್ರಸ್ವರವು ಇರುವ ಕಾಲದಲ್ಲಿ ಕೆಟ್ಟಮಾತುಗಳಂ ಕೇಳಿದರೆ ಇದು ಕಾಲವಲ್ಲ ವೆಂದು ಸೌಮ್ಯ ಭಾವದಿಂದಲೇ ಇರುವನು. ಈ ಸೌಮ್ಯಭಾವವು ಅತಿ ಸೌಖ್ಯ ವನ್ನುಂಟು ಮಾಡುವದು. ಇದು ಆಲೋಚನೆಯಂ ಕೊಡುವದು ಆಲೋಚನೆಯಂದರೆ ಜ್ಞಾನ ಚಕ್ಷು ಮನಸ್ಸಿಗೆ ಚಂದ್ರ ಆದಿದೇ ವತೆ ಯಾದ್ದರಿಂದ ಪೂರ್ಣಚಂದ್ರನಂತ ಸ್ವಚ್ಛವಾದ ಜ್ಞಾನವುಂ ಟಾಗುವದು. ಈ ಮ್ಯಾಪಿನೋಪಾದಿಯಲ್ಲಿರುವ ಶಂಕಿನಿಂದ ಸ ಹಜವಾದ ಸಹಜ ಶಂಕನ್ನು ತಿಳಿದು ಸುಖಪಡುವದು. ಇದ ಕ್ಕಾಗಿಯೇ ಬಲಮುರಿ ಶಂಕು ಶ್ರೇಷ್ಟವೆಂತ ಗಾಧಿಯಾಯಿತು. ಗಾಧಿಯು ವೇದಕ್ಕೆ ಸಮವಾದ್ದು.

## ಘಟ ಪಟ ನ್ಯಾಯ.

ಸೂರ್ಯೋದಯಕಾಲದಲ್ಲಿ ಪೂರ್ವಕ್ಕೆ ಮುಖವಾಗಿ ನಿಂತು ಕೊಂಡು ಜನಗಳಂ ನೋಡುತ್ತೀನೆಂಬುವನಂತೆ ಕೋಟಿ ಸೂರ್ಯ ಪ್ರಕಾಶ ಮಾನವಾದ ಬ್ರಹ್ಮನಂ ಪ್ರತ್ಯೇಕವಾಗಿ ಎದುರಿಗಿಟ್ಟು ಕೊಂಡು ಜೀವನು ಜಗತ್ತಿನ ಸ್ಥಿತಿಯನ್ನರಿಯುವೆ ನೆಂಬುವದು

ಪುಾರ್ಜಿತನವಲ್ಲವೆ? ಆ ಬ್ರಹ್ಮವು ತಾನಾದಲ್ಲದೆ ಜಗತ್ತಿನ ಸ್ಥಿತಿಯು ಕಾಣುವದಿಲ್ಲ. ಒಂದು ಗಣ್ಣಿನ ಚಿತ್ರವು ಶ್ರೇಷ್ಟವೆಂತ ಹೇಳುತ್ತಾರೆ. ಅದು ಹ್ಯಾಗಂದರೇ- ಮಿಥ್ಯಾ ಪ್ರಪಂಚವೆಂಬ ವೈರಾಗ್ಯದಿಂ ಚಿತ್ತಲೆಯಾಗಿರುವ ಸರ್ವವೂ ಬ್ರಹ್ಮಸತ್ತೆ ಯಂಬ ಸಮಭಾವದಿಂ ಕಾಣುವ ವಂದೇ ಕಣ್ಣಿನ ಮೂರುವರೆ ವೊಳವಾಗಿರುವ ಘಟವುಸುಟ್ಟಪಟದಂತೆ ಇರುವದಾದ್ದರಿಂದ ಒಂದೇ ಕಣ್ಣಿನ ಚಿತ್ತವು ಶ್ರೇಷ್ಟವೆಂತ ಹೇಳಬೇಕಾಯಿತು. ಈಗಲೂ ಸನ್ಯಾಶಿಗಳು ಮೂರುವರೆ ಮಳದ ಚಿತ್ರಕ್ಕೆ ಒಂದು ಗೇಣು ಕಾವೀ ಪಟವನ್ನು ಕಟ್ಟಿ ಹಿಡಿದುಕೊಂಡಿರುವರು.

**ಶಿಷ್ಯನ ಹೃದ್ರೋಗವನ್ನು ಹೋಗಲಾಡಿಸುವದು.**

ಹ್ಯಾಗಂದರೆ—ಅತ್ಯಂತ ಸೂಕ್ಷ್ಮವಾಗಿರುವದು ಏನಂದರೇ, ಗೋವಿನ ಹೊಟ್ಟೆಯಲ್ಲಿ ಘೃತವು ಗೋರೋಜನವುಇರುತ್ತೆ ಆಗೋವಿಗೆ ಹೊಟ್ಟೆಶೂಲಿ ಯಾದಾಗ್ಗೆ ಗೋರೋಜನವನ್ನು, ಘೃತವನ್ನು ಮಿಶ್ರಮಾಡಿ ಆ ಗೋವಿಗೆ ಹಾಕಿದರೇ ಆ ಹೊಟ್ಟೆಶೂಲಿಯು ಹೋಗುವದು. ಘೃತವು ಗೋರೋಜನವು ಗೋವಿನ ಹೊಟ್ಟೆಯಲ್ಲಿದ್ದು ಗೋವಿಗೆ ಹೊಟ್ಟೆಶೂಲಿ ಹ್ಯಾಗೆ ವುಂಟಾಗುತ್ತ್ರೋ ಹಾಗೆ ಈ ಪಶುಪ್ರಾಣಿಗಳಾದ ಅಜ್ಞಾನಿಗಳಿಗೆ ಅವಿಚಾರದ ದೆಶೆಯಿಂದ ಉಂಟಾಗುವ ಸಂಶಯವೆಂಬ ಹೃದ್ರೋಗವನ್ನು ಹೋಗಲಾಡಿಸುವದಕ್ಕೋಸ್ಕರ ದೃಶ್ಯವೆಂಬ ಓಷಧಿಯಂ ತಂದು ಶಿಷ್ಯೆಯಂ ವಿಸರ್ಜಿಸಿ ಇದರೊಳಗಿರುವ ಸಾರವಂ ತೆಗೆದು ಆನಂದ ಭೈರವಿ ಎಂಬ ದ್ವೈತಜ್ಞಪ್ತಿ ಮಾತ್ರೆಗಳಂಕಟ್ಟಿ ಸಂಶಯವೆಂಬ ರೋಗವು ತೋರಿತೋರಿದ ಕಾಲದಲ್ಲಿ ಈ ಮಾತ್ರೆಗಳಂ ಸ್ವೀಕರಿಸುತ್ತಾ ಆತ್ಮಾನಂದ ರಸಸ್ವಾದನದಿಂದ ಈ ಎ

ರ್ಡಾಗಿ ತೋರುವ ಜಗತ್ತನ್ನ ಶಿಷ್ಯಂಯಂತೆತಿಳಿದು ಸತ್ಯ ಜ್ಞಾನಾ ನಂದಮಯ ಸ್ವರೂಪವನ್ನಾಗಿ ಮಾಡಿ ದೇಹ ಮರೆಯಾಗಿದ್ದ ಮಾತ್ರಕ್ಕೆ ಎರಡಾಗಿ ಕಾಣುವ ಸಂಶಯವಂ ಕಳೆಯುತ್ತಾನಾದ್ದ ರಿಂದ [ಭಿಷಜೇ ಭವರೋಗಿಣಾಂ] ಎಂಬ ಹೆಸರು ಬಂದಿತು. ಆದ್ದರಿಂದ ಪರುಷ ಮುಟ್ಟಿದ ಲೋಹವು ಭಂಗಾರ ವಾಗುವದ ಲ್ಲದೆ ಪರುಷವೇ ಆಗುವದಿಲ್ಲ. ಈ ಗುರುವು ಮುಟ್ಟಿದ ಶಿಷ್ಯನು ಗುರುಸ್ವರೂಪವೇ ಆಗುವ ನಾದಕಾರಣ ಪರುಷಕ್ಕಿಂತ ಗುರು ವೇ ಶ್ರೇಷ್ಠನಾದವನು. ನಗುರೋರಧಿಕಂ ನಗುರೋರಧಿಕಂ ನಗುರೋರಧಿಕಂ ಶಿವಶಾಸನತಂ ಶಿವಶಾಸನತಂ ಶಿವಶಾಸನತಂ ಗುರುವಿನಿಂ ಪರುಷವಂ ಪಡಿಯುಬಹುದಲ್ಲದೇ, ಪರುಷದಿಂ ಗು ರುವನ್ನ ಪಡಿಯುವದಿಲ್ಲ.

### ಜ್ಞಾನಿಯ ಸಣ್ಣ ಸ್ವಪ್ನ.

| | | |
|---|---|---|
| ಹದಿನೈದು ದಿನ | .... | ಒಂದು ಪಕ್ಷ. |
| ಎರಡು ಪಕ್ಷ | .... | ಒಂದು ಮಾಸ. |
| ಎರಡು ಮಾಸ | .... | ಒಂದು ರುತು. |
| ಮೂರು ಋತು | .... | ಒಂದು ಅಯನ. |
| ಎರಡು ಅಯನ | .... | ಒಂದು ಸಂವತ್ಸರ. |

| | | | |
|---|---|---|---|
| ೪೩೨೦೦೦ | ಸಂವತ್ಸರ | 1 | ಒಂದು ಕಲಿಯುಗ. |
| ೮೬೪೦೦೦ | ಸಂವತ್ಸರ | 2 | ಒಂದು ದ್ವಾಪರಯುಗ. |
| ೧೨೯೬೦೦೦ | ಸಂವತ್ಸರ | 3 | ಒಂದು ತ್ರೈತಾಯುಗ. |
| ೧೭೨೮೦೦೦ | ಸಂವತ್ಸರ | 4 | ಒಂದು ಕೃತಯುಗ. |
| ೪೩೨೦೦೦೦ | ಸಂವತ್ಸರ | 5 | ಒಂದು ಮಹಾಯುಗ. |

೭೧ ಮಹಾಯುಗ ಒಂದು ಮನ್ವಂತರ.

೯೯೪ ಮಹಾಯುಗ ಹದಿನಾಲ್ಕು ಮನ್ವಂತರ

೩ ಮಹಾಯುಗ ಒಂದು ಸಂಧಿ.

೧೦೦೦ ಮಹಾಯುಗ ಬ್ರಹ್ಮನಿಗೆ ಒಂದು ಹಗಲೆ

೩೧೧೦೪೦೦೦೦೦೦೦೦೦೦ ಸಂ॥ರ ಬ್ರಹ್ಮನಿಗೆ ಆಯುಷ್ಯ ಅಥವ ಒಂದು ಕಲ್ಪ.

ನಿದ್ರಾದೋಷದಿಂದ ಈ ಅನಂತಕೋರಿ ಅಡಗಿದ ಹಾಗೆಯು ಎಚ್ಚರಕಾಲದಲ್ಲಿ ಏನೊಂದು ಇಲ್ಲದಂತೆಯು ಹ್ಯಾಗೋ. ಹಾಗೇ ಜ್ಞಾನಿಗೆ ಮಾಯಾ ಸಬ್ಮಂದ ದೋಷದಿಂದ ಸ್ವರ್ಗ ನರಕ ಪುಣ್ಯ ಪಾಪ ಸುಖದುಃಖ ಪಶುಪಕ್ಷಿ ಮನುಷ್ಯ ದೇವತ ಇವೆ ಮುಂತಾದ ಕಾಲ ಕಾರ್ಯಗಳು ತೋರಿ ಅಡಗುವವು. ಆದ್ದರಿಂದ ಈಶ್ವರ ಸೃಷ್ಟಿಯು ಅನಂತ ಕಲ್ಪವು ಮತ್ತು ಅನಾದಿಯು ಆಗಿರುತ್ತೆ ಯನ್ನುವ ವಿಷಯವು ನಿಶ್ಚಯವಾಗಿ ತಿಳಿದಾಚರಿಸುವವಲ್ಲದೆ ಒಂದು ತಾಸಿಗೆ ಭೂಮಿಯು ಜಲಮಯವಾಗಿಯು ತೋಟವು ಬಯಲಾಗಿಯು ದಿನ್ನೆ ಸರೋವರವಾಗಿಯು ಉಪ್ಪರಿಗೆ ತಿಪ್ಪೆಯಾಗಿಯೂ ಧನಿಕನು ದರಿದ್ರನಾಗಿಯು ಮುದುಕನು ಹುಡುಗನಾಗಿಯು ಗ್ರಾಮವು ಆರಣ್ಯವಾಗಿಯು ಒಂದು ಘಳಿಗೆ ಯೊಳಗೆ ಮೃಗಗಳು ಮತ್ತೊಂದು ಘಳಿಗೆಯಲ್ಲಿ ಪಕ್ಷಿಗಳು ಮತ್ತೊಂದು ಘಳಿಗೆಯಲ್ಲಿ ಅನಂತ ರೀತಿಯಿಂದ ತೋರಿ ಅಡಗುವವು. ಇದರಂತೆ ಜ್ಞಾನಿಗೆ ಕಲ್ಪಕಾಲವು ದೊಡ್ಡ ಸ್ವಪ್ನವಾಗಿ ತೋರಿ ಅಡಗುವದು.

## ಪೂಜ್ಯ ಪೂಜಕಾಭಾವ.

ಪಾರ್ಥೀವ ಲಿಂಗವನ್ನು ಪೂಜಿಸಬೇಕಾದರೇ—ನಿಂತು ಕೊಳ್ಳುವದಕ್ಕೆ ಅಧಾರವೇನು? ಆತ್ಮ ಶೇಷನೆ ಆಧಾರ. ಗಂಗಾಧರೇಶ್ವರನಿಗೆ ಅಭಿಷೇಕಮಾಡುವದಕ್ಕೆ ಜಲಯಾವು? ಚಿಜ್ಜಲ. ಜ್ಯೋತಿರ್ಮಯ ಲಿಂಗವನ್ನು ಬೆಳಗಬೇಕಾದ ಬತ್ತಿಯನ್ನು ಅಂಟಿಸುವದೆಲ್ಲಿ ಚಿಜ್ಜ್ಯೋತಿಯಲ್ಲಿ ಮಂತ್ರಮಯನಾದ ನಿರುಪಮ ಲಿಂಗಕ್ಕೆ ಜಪಿಸುವ ಅಕ್ಷರಗಳ ಗಾಯತ್ರಿ ಯಾವುದು. ಅಜಪಗಾಯತ್ರಿ ಪರಿಮಳ ಲಿಂಗಕ್ಕೆ ಅರ್ಪಿಸುವ ಶ್ರೇಷ್ಟವಾದ ಪುಷ್ಟಗಳ್ಯಾವು? ಹೃದಯ ಕಮಲ ಅವಿರಳ ಲಿಂಗಕ್ಕೆ ಪ್ರದಕ್ಷಿಣವೆಲ್ಲಿ ಅಪ್ರದಕ್ಷಿಣ ನಿತ್ಯ ತೃಪ್ತನಾದ ಶಾಂತೇಶ್ವರನಿಗೆ ಅರ್ಪಣವೇನು? ಆತ್ಮಾರ್ಪಣ.

## ಸಮಾಧಿ ಲಕ್ಷಣ.

ಅಖಂಡ ಸ್ವರೂಪನಾದ ಪರಮಾತ್ಮನಿಗೆ ಭಿನ್ನವಾದ ಪದಾರ್ಥವೇ ಇಲ್ಲದಿರುವಲ್ಲಿ ಪೂಜ್ಯಪೂಜಕ ಭಾವವೆಂತು ಸಂಭವಿಸೀತು? ಮುಡುವದಕ್ಕು ತೋಯುವದಕ್ಕು ಆಕಾಶವು ಅವಕಾಶವು ಇಲ್ಲದಂತೆ ಆತ್ಮನು ಸುಖದುಃಖಗಳಿಗವಕಾಶ ವಿಲ್ಲದಿರುವನು. ಸರ್ವವು ಶಿವಮಯವೆಂಬ ಜ್ಞಾನವೇ ಸಮಾದಿಯುಳ್ಳದೆ ಇವನ ಮನವು ಎಲ್ಲೆಲ್ಲಿಗೆ ಹೋದರು ಅಲ್ಲಲ್ಲಿಯೆ ಸಮಾಧಿಯಂತ ಹೇಳಬೇಕು. ಗಗನದಂತೆ ಯಾವದು ತಗಲಲಿಲ್ಲವೆಂದು ಯಾವನು ಅನ್ನುತ್ತಾನೋ ಅವನೇ ಜ್ಞಾನಿಯು. ಕತ್ತಲೆಯಲ್ಲಿ ಹಾವಿನ ಹೆಜ್ಜೆಯನ್ನು ಹಿಡಿಯುತ್ತೇನೆಂಬ ಮೂಢನಂತೆ ಸದ್ಗುರೋಪದೇಶವಿಲ್ಲದೆ ಶಿವನಂ ಕಂಡೆನೆಂಬುವನ ಮಾತು ಗಗನ ಪುಷ್ಪವಂ ಗೊಡ್ಡಿ ಯಮಗನು ತಂದೆನೆಂಬುವನ ಮಾತು ವಂದೇಆಗಿರುತ್ತೆ.

ತೊಟ್ಟಿಲು ತೂಗುತ್ತಿದ್ದಾಗ್ಯು ಮಗುವೆಂತು ಚಲಿಸದಿರುವದೋ ಸೂರ್ಯನ ರಥ ಬಹಳ ವೇಗವಾಗಿ ಹೋದರು, ಸೂರ್ಯನು ಕುಳಿತೇ ಇರುವನೋ, ನೀರು ಎಷ್ಟು ಶೀಘ್ರವಾಗಿ ಹರಿದರು ಕೆಳಗಿನ ಬಂಡಿಯು ಚಲಿಸದಿರುವದೋ ಹಾಗೇ ಸದ್ಗುರೋಪದೇಶವಂಪಡ ವನ ಮನಸ್ಸು ಘಟ್ಟಿಯಾಗಿಯೇ ಇರುವದು. ಕರ್ಮಾತಸಿಗೆ ಯಾವದಂ ನೋಡಿದರು ಆಶುಚಿಯೇ ಕಾಣುವಂತೆ ಜ್ಞಾನಿಗೆ ಕಾಣಲಾರದು. ಗೋಮೂತ್ರಾದಿ ಭಾವನೆಗಳಿಂ ವಿಷವು ಅಮೃತವಾಗುವಂತೆ ಜ್ಞಾನಿಯ ಭಾವಕ್ಕೆ ಜಗತ್ತು ಚಿದ್ರೂಪವೇ ಆಗುವದು. ಚಿದ್ವಸ್ತುವಿನಲ್ಲಿ ದೃಷ್ಟಿ ಇಲ್ಲದವನ ಶರೀರವು ಉಸುರಾಡುವ ಹೆಣವಿನಂತೆಯೇ ಸರಿ. ಯಾವಾಗ ವಿಚಾರ ಬಲದಿಂ ಜಗ್ರವು ಸ್ವಪ್ನಪ್ರಾಯವಾಗುವದೋ ಆಗಲೇ ದೃಶ್ಯದಲ್ಲಿ ವೈರ್‍ಯಸ್ಯ ಉಂಟಾಗುವದು. ಬ್ರ. ಚ. ದ್ವಿ. ೧, ೨, ೩ನೇ ಅಧಿ.

ಪದ|| ತನವೇನು ಮಾಡ್ವದು ಮನಮಾಡೊ ದಲ್ಲಾದೆ, ಮನಶೀನ ಕಲ್ಪಾನೆ ಜಗವೆಲ್ಲಾ | ಮನಸಾನು ತಡದಾರೆ ತ್ರಿನೆಂಪ ನೀನಾಗೂವಿ, ತನಯಾನೆಕೇಳು ಸದ್ಗುರುವಾಕ್ಯ | ಮನವೇನು ಮಾಡ್ವಾದು ಜ್ಞಾನಾವೆ ಮಾಡ್ವಾದು, ಜ್ಞಾನಾದಲೀಲೆಯಿ ಜಗವೆಲ್ಲಾ | ಜ್ಞಾನಾದ ಲೀಲೆಯಿ ಜಗವೆಲ್ಲ ವಾದಾರೆ ಭಾವನಿಕೋಧವು ತನಯನೇ || ಮತ್ತು ನಾಶಿಕಾಗ್ರದಿಂದ ಮೇಲಕ್ಕೆ ಬ್ರಹ್ಮಸ್ಥಾನದವರಿಗು ಹತ್ತು ಹನ್ನೆರಡಂಗುಲವಾಗುವದು. ಹತ್ತು ಅಂಗುಲದಿಂದ ಎರಡು ಅಂಗುಲ ಶಿವಶಕ್ತಿಯರಿರುವ ಸ್ಥಾನವಾದ್ದರಿಂದ ಅತ್ಯತಿಷ್ಟದ್ದಶಾಂಗುಲನೆಂತಲು ದ್ವಾದಶಾಂಗುಲ ಪ್ರಮಾಣನೆಂತಲು ಶೃತಿಯಾಯಿತು. ಇದರಿಂದ ಹ್ರಸ್ವಾಕ್ಷರಗಳ ದ್ವಾದಶಮಾತ್ರೆಗಳನ್ನು ಒಂಭತ್ತು ವ್ಯಾಳ್ಯ ರೇಚದಿಂ ವಾಚಕವಾಗಿ ಉಚ್ಚರಿಸಿ ಇವೇಮಾತ್ರೆಗಳನ್ನು ಪೂರಕದಿಂ ಮಾ

ನಶಿಕವಾಗಿ ಕುಂಭಕದಿಂ ಉಪಾಂಶಿಕವಾಗಿ ಪ್ರತಿ ಮಾತ್ರೆಗಳಿಗೆ ಬಿಂದುವಂ ಶೇರಿಸಬೇಕು. ಅಂದರೆ ಚಿದ್ಬಿಂದುವಂ ಹೊಂದಬೇಕು. ಹೀಗೆ ಜಪಿಸುವದಕ್ಕೆ ಪ್ರತ್ಯಾಹಾರವೇ ಸಾಧನವಾದ್ದು. ಕ್ಷೀರಾಹಾರ ಉತ್ತುಮೋತ್ತಮು ಈ ಸಾಧನದಿಂದ ಜಂಗಮ ಲಿಂಗವೆಂಬ ಅನಾಹತ ಚಕ್ರದಲ್ಲಿ ಶಿಷ್ಟದುಷ್ಟಾಗಮನವು ಸುಖ ದುಃಖಾಗಮನವು ಕುಶಬ್ದ ಸುಶಬ್ದಾಗಮನವು ಗೋಚರವಾಗುತ್ತೆ. ಮತ್ತು ಹಸು ತೃಷಿಗಳು ನಿಸ್ತರಂಗಾಂಬುಧಿಯಂತೆ ಸ್ತಬ್ಧವಾಗುವವು. ರೋಗಗಳು ಘಾಳಿಗೆ ತರಗೆಲೆಗಳಂತೆ ದೂರವಾಗಿ ಹೋಗುವವು. ಮಲ ಮೂತ್ರವು ಶುದ್ಧಿಯಾಗುವವು. ತಾನೆ ಚಿನ್ಮಯನಾಗುವನು. ಇದರಿಂದ ಯಾಚನೆಯು ನಿಲ್ಲುವದು. ಲೋಕವಲ್ಲಿ ಸರ್ವರಿಂದಲೂ ಪೂಜಿಸಲ್ಪಡುವನು. ರೋಮಜನಂತೆ ಭೃಶುಂಡ ಋಷಿಯಂತೆ ಬಹುಕಾಲ ಬದುಕುವನು. ಇದೇ ಬ್ರಹ್ಮ ಲಿಪಿಯಂ ತೊಯುವದು. ಒಂದು ವಿಘಳಿಗಿಗೆ ಆರು ಶ್ವಾಸ ವಾಗುವದು. ಒಂದು ಎರಡು ನಿಮಿಷಕ್ಕೆ ರೇಚಕ ಪೂರಕವಾಗಿ ಮಂತ್ರವಂ ಜಪಿಸುವದು ಹ್ಯಾಗಾಗುವದೆಂದರೆ ಕುದುರೆಯ ಮ್ಯಾಲೆ ಅರಿಯದವನ ಕೂಡ್ರಿಸಿ ಹೊಡೆದಂತಾಗುವದು. ಕುದುರೆ ಓಟದ ಜಪಮಾಡುವವನ ಕೇವಲ ಪಶುವೆಂದೇ ಭಾವಿಸ ತಕ್ಕದ್ದು. ಇದರಂತೆ ಮಾಡದೆ ಒಂದು ವಿಘಳಿಗಿಗೆ ಆರುಶ್ವಾಸ, ಶ್ವಾಸಕ್ಕೆ ನೂರಾ ಎಂಟು ಮಾತ್ರೆಗಳು ಈಪ್ರಕಾರ ನಡಶಿದರೆ ನೂರಾ ಇಪ್ಪತ್ತು ವರುಷ ಆಯು. ಒಂದು ವಿಘಳಿಗಿಗೆ ಮೂರು ಶ್ವಾಸದಂತೆ ನಡಸಿದರೆ ಇನ್ನೂರಾ ನಾಲ್ವತ್ತು ವರುಷ ಆಯು. ಇದರಂತೆ ಹೆಚ್ಚಿಗೆ ಮಾಡಿಕೊಂಡು ಪ್ರಾರಾಬ್ಧ ಲಿಪಿಯಂ ತೊಡಿಯುವದು. ಶೀಘ್ರದಲ್ಲಿಯೇ ಫಲವಾಗುವದು. ಯಾವ ವೃಕ್ಷ ಗುರುವೆ ಕಲ್ಪವೃಕ್ಷವಲ್ಲವೆ ಪರುಷ ಸೋಂಕಿದ

ಲೋಹದಂತೆ ಏನು ಸೋಂಕಿದರೆ ತಾನು ಧನ್ಯನಾಗುವನು? ಗುರುವೇ ಅಪ್ರತ್ಯಕ್ಷವಾಗಿರುವ ಪರುಷಾಪೃಗವನ್ನು ಕೈವಶ ಮಾಡಿಕೊಡುವ ಜ್ಞಾನ ಗುರುವಿನ ಪಾದವಲ್ಲವೆ! ಇಂಥಾ ಗುರುವಿನ ಪಾದ ಸೋಂಕಿದರೆ ತಾನು ಧನ್ಯನಾಗುವನು. ಸುಷುಪ್ತಿ ಇಂದೆ ಚಿತ್ತ ಶಿಂಹದ ಬಲೆಯಂತೆಜ್ಞಾನಿಗೆ ಸೋಂಕಿದ ಪ್ರಪಂಚವೆಂಬ ಪಂಜರವು ಶೀಘ್ರವಾಗಿಯೇ ಊದಿದ ದೀಪದಂತೆ ಹರಿದು ಹೋಪದು. ಸುಖಮಯವಾತ್ಮನು ಸುಖವಾತ್ಮನ ಮಯ ಸುಖಪರಮಾತ್ಮರಿ ಗೇಕವಿದು. ಬ್ರ॥ ಸೂ॥ ಪ್ರ. ಪ್ರ. ೬ನೇ ಅ.

ದಶ ದ್ವಾದಶಾಂಗುಲ ಪ್ರಮಾಣ ನೆಂತ ಶೃತಿ ಇರುತ್ತೆ. ಅಂದರೆ ತಾನು ಕುಳಿತು ಕೊಳ್ಳಲಿ, ನಿಂತು ಕೊಳ್ಳಲಿ, ಮಲಗಿ ಕೊಳ್ಳಲಿ, ದ್ವಾದಶಾಂಗುಲ ಸ್ಥಲವಿದ್ದರೆ ಸಾಕು. ತನಗವಶ್ಯಕವಾಗಿ ಬೇಕಾಗಿರುವ ಇಷ್ಟು ಸ್ಥಲದಲ್ಲಿ ಚಿತ್ತಪರಿಣಾಮವಂ ಹೊಂದುವದು ಬಿಟ್ಟು ಇಲ್ಲದ ಕಲ್ಪನೆ ಮಾಡಿಕೊಂಡು ಅತ್ಯಂತಾಶೆಯಿಂದ ದುಃಖಪಡಬ್ಯಾಡವೆಂದು ಶೃತಿ ಹೇಳಿರುವದು.

ಶುದ್ಧ ಗುರು ಮಾಡುವ ಉಪದೇಶ ವೇನಂದರೇ:— ವಿಧಿ, ನಿಷೇಧ, ಪುಣ್ಯ, ಪಾಪ, ಸುಖ, ದುಃಖ, ಸ್ವರ್ಗ, ನರಕ, ಇಹಲೋಕ, ಪರಲೋಕ ಇವುಗಳ ತಾರತಮ್ಯವಂ ತಿಳಿಸುವನು.

ಇನ್ನು ಶಿದ್ಧಗುರು ಮಾಡುವ ಉಪದೇಶ ಅನ್ಯರ ಮಲಕ್ಕಾಕಶ ಗ್ಯೆಯ್ಯುವ ಹೇಶಿ ಗುಣವಂಬಿಡಿಸಿ ಜೀವನೋಪಾಯುವನ್ನು ಶಿವಾನುಭಾವದಿಂದ (ಸ್ವಾನುಭವದಿಂದ) ಪರಿಹರಿಸಿಕೊಳ್ಳಬೇಕೆಂದು ತಿಳಿಸುವನು.

ಪ್ರಸಿದ್ಧಗುರು ಮಾಡುವ ಉಪದೇಶ ಈ ಎರಡಶನ್ನು ಬಿಡಿಸಿ ಅನ್ಯರಿಗೆನೇ ಆಗಲಿ ಸಂತೋಷದಿಂದಿರುವಂತೆ ನಿನಗೆನೇ ಆಗಲಿ ಸಂತೋಷದಿಂದಿರಬೇಕೆಂಬುವದೊಂದೆ ತಿಳಿಸುವನು.

| | | | | | | | |
|---|---|---|---|---|---|---|---|
| | ನ | ಮ | ಶಿ | ವ | ಯ | ಓಂ | |
| | ಆಚಾರಲಿಂಗ ಜಪ | ಗುರುಲಿಂಗ ಜಪ | ಶಿವಲಿಂಗ ಜಪ | ಜಂಗಮಲಿಂಗ ಜಪ | ಪ್ರಸಾದಲಿಂಗ ಜಪ | ಮಹಲಿಂಗ ಜಪ | 1728 .... ನ |
| | 4 ದಳಕ್ಕೆ | 6 ದಳಕ್ಕೆ | 10 ದಳಕ್ಕೆ | 12 ದಳಕ್ಕೆ | 16 ದಳಕ್ಕೆ | 2 ದಳಕ್ಕೆ | 2592 .... ಮ |
| | 4 ಸಮಯ | 4 ಸಮಯ | 4 ಸಮಯ | 4 ಸಮಂು | 4 ಸಮಯ | 4 ಸಮಯ | 4320 .... ಶಿ |
| 108× | 16 ಸಾರಿಜಪ | 24 ಸಾರಿಜಪ | 40 ಸಾರಿಜಪ | 48 ಸಾರಿಜಪ | 64 ಸಾರಿಜಪ | 8 ಸಾರಿಜಪ | 5184 .... ವ |
| ಚಿದ್ರುದ್ರಾಕ್ಷಿಗಳಿಂದ ಜಪ | 1728 ಪಟ್ಟು | 2592 ಪಟ್ಟು | 4320 ಪಟ್ಟು | 5184 ಪಟ್ಟು | 6912 ಪಟ್ಟು | 864 ಪಟ್ಟು | 6912 .... ಯ |
| | | 1728<br>4320 ಪಟ್ಟು | | 4320<br>9504 ಪಟ್ಟು | | 6912<br>7776 ಪಟ್ಟು | 864 .... ಓಂ<br>21600 ಜಪ |
| 108<br>16<br>648<br>108<br>1728 | ಯಿಷ್ಟಲಿಂಗ ಜಪ.<br>ಅ | | ಪ್ರಾಣಲಿಂಗ ಜಪ.<br>ಉ | | ಭಾವಲಿಂಗದ ಜಪ.<br>ಮ | | ಘಳಿಗೆ ವಿಘಳಿಗೆ |
| | ಆಚಾರಲಿಂಗ ಜಪ.<br>ಕಾಲ. | ಗುರುಲಿಂಗ ಜಪ.<br>ಕಾಲ. | ಶಿವಲಿಂಗ ಜಪ.<br>ಕಾಲ. | ಜಂಗಮಲಿಂಗ ಜಪ.<br>ಕಾಲ. | ಪ್ರಸಾದಲಿಂಗ ಜಪ.<br>ಕಾಲ. | ಮಹಲಿಂಗ ಜಪ.<br>ಕಾಲ. | 4 48 ನ<br>7 12 ಮ<br>12 0 ಶಿ<br>14 24 ವ<br>19 12 ಯ<br>2 24 ಓಂ. |
| ದಳ 1ಕ್ಕೆ<br>1 ಘಳಿಗೆ<br>12 ವಿಘಳಿಗೆ ಪ್ರಕಾರ | ಘಳಿಗೆ ವಿಘಳಿಗೆ<br>4 48 | ಘಳಿಗೆ ವಿಘಳಿಗೆ.<br>7 12<br>4 48<br>12 0 | ಘಳಿಗೆ ವಿಘಳಿಗೆ<br>12 0 | ಘಳಿಗೆ ವಿಘಳಿಗೆ<br>14 24<br>12 0<br>26 24 | ಘಳಿಗೆ ವಿಘಳಿಗೆ<br>19 12 | ಘಳಿಗೆ ವಿಘಳಿಗೆ<br>2 24<br>19 12<br>21 36 | |
| | ಇಷ್ಟಲಿಂಗ ಜಪಕಾಲ. | | ಪ್ರಾಣಲಿಂಗ ಜಪಕಾಲ. | | ಭಾವಲಿಂಗ ಜಪಕಾಲ. | | 60 00<br>ಜಪಕಾಲ ಪಟ್ಟು. |

ಏಕೋರಾಮಾರಾಧ್ಯರು ಮಾಡುವ ಉಪದೇಶ.

## 108 ಚಿದ್ರುದ್ರಾಕ್ಷಿಗಳ ವಿವರ ವೇನಂದರೇ.

| | | | | | | | | | | | |
|---|---|---|---|---|---|---|---|---|---|---|---|
| ವ | ಸ | ಶೇ | ಷ | ನ | ಬ | ಭ | ಮ | ಯ | ರ | ಲ | ಪು |
| 1 | 2 | 3 | 4 | 5 | 6 | 7 | 8 | 9 | 10 | 11 | 12 |
| ಡ | ಢ | ಣ | ತ | ಥ | ದ | ಧ | ನ | ಪ | ಫ | ಶಿ | ಕ |
| 13 | 14 | 15 | 16 | 17 | 18 | 19 | 20 | 21 | 22 | 23 | 24 |
| ಖ | ಗ | ಘ | ಙ | ಚ | ಛ | ಜ | ಝು | ಞ | ಟ | ಠ | ವ |
| 25 | 26 | 27 | 28 | 29 | 30 | 31 | 32 | 33 | 34 | 35 | 36 |
| ಅ | ಆ | ಇ | ಈ | ಉ | ಊ | ಋ | ೠ | ಌ | ೡ | ಏ | ಐ |
| 37 | 38 | 39 | 40 | 41 | 42 | 43 | 44 | 45 | 46 | 47 | 48 |
| ಓ | ಔ | ಅಂ | ಅಃ | ಯ | ಹ | ಕ್ಷ | ಅ | ಉ | ಮ | ಅ | ಅ |
| 49 | 50 | 51 | 52 | 53 | 54 | 55 | 56 | 57 | 58 | 59 | 60 |
| ಇ | ಈ | ಉ | ಊ | ಋ | ೠ | ಲಿ | ಲೀ | ಏ | ಐ | ಓ | ಔ |
| 61 | 62 | 63 | 64 | 65 | 66 | 67 | 68 | 69 | 70 | 71 | 72 |
| ಅಂ | ಅಃ | ಕ | ಖ | ಗ | ಘ | ಙ | ಚ | ಛ | ಜ | ಝು | ಞ |
| 73 | 74 | 75 | 76 | 77 | 78 | 79 | 80 | 81 | 82 | 83 | 84 |
| ಟ | ಠ | ಡ | ಢ | ಣ | ತ | ಥ | ದ | ಧ | ನ | ಪ | ಫ |
| 85 | 86 | 87 | 88 | 89 | 90 | 91 | 92 | 93 | 94 | 95 | 96 |
| ಬ | ಭ | ಮ | ಯ | ರ | ಲ | ವ | ಶೇ | ಷ | ಸ | | |
| 97 | 98 | 99 | 100 | 101 | 102 | 103 | 104 | 105 | 106 | | |
| ಹ | ಕ್ಷ | | | | | | | | | | |
| 107 | 108 | | | | | | | | | | |

ವಕಾರಾದಿಯಾಗಿ ಕ್ಷಕಾರಾಂತ್ಯಕ್ಕೆ ವಕ್ಷ ಅಂದರೆ ಅನಾಹತಸ್ಥಾನ ಜಂಗಮಲಿಂಗ ಸೌಜ್ಞೆ ಇವೇ ಎರಡು ಭುಜಮಣಿಗಳು, ಇದೇ ಜಪಮಾಲಿಕ. ಯಜ್ಞೋಪವೀತ ಹೃದಯ ಕಮಲದಲ್ಲಿ ಪರಮ ಹಂಸನು ಚಿತ್ತವಿಶ್ರಾಂತಿಯಂ ಹೊಂದುವದೇ ಸಮಾಧಿ. ಹೃದಯಕಮಲವು ಬಾಳೆ ಹುವ್ವಿನಂತೆ ತಲೆಕೆಳಗಾಗಿ

ರುಪದು. ಪೂರಕವಂ ಮಾಡಿದ ಶ್ವಾಸವನ್ನು ಹೊರಗೆ ಬಿಡದೆ ನೂರ ಎಂಟು ಮಾತ್ರೆಗಳಂ ಆಸ್ನುವ ಕಾಲದ ವರಿಗು ವಳಗೆ ತಡವರೆ ಕಮಲವು ಅತಿಸೂಕ್ಷ್ಮವಾಗಿ ಅರಳುವದು. ಇದು ಕೇವಲ ಶಿವಯೋಗಿಗಲ್ಲದೆ ಯಾರಿಗೂ ತಿಳಿಯದು. ಇದಕ್ಕೆ ಶಾಂತಿ ವಿದ್ಯೆ ಪ್ರತಿಷ್ಠ ನಿವೃತ್ತಿ ಈನಾಲ್ಕುಕಲೆಗಳಿಂದಿರುವದೆ ಗುರ್ತು.

ಇದೇ ಷಟ್ಸ್ಥಲ ಜ್ಞಾನಿಯ ಭವಿಷ್ಯತ್ಕಾಲಜ್ಞಾನ. ನಾಲ್ಕು ಸಮಯವನ್ನು ತಿಳಿಯುವಿಕೆ ಆಚಾರಲಿಂಗದ ಜಪಕಾಲ ನಾಲ್ಕುಭಾಗ ಮಾಡಿದರೆ ೧ ಘಳಿಗಿ, ೧೨ ವಿಘಳ್ಗಿ ಆಗುವದು. ಪ್ರಥಮ ಬಾಲಸಮಯ, ದ್ವಿತಿಯ ಕುಮಾರ ಸಮಯ, ತೃತಿಯ ಯವ್ವನ ಸಮಯ, ಚತುರ್ಥ ಚೀಲಾಳ ಸಮಯ ಅಂದರೆ ವೃದ್ಧಾಪ್ಯ ಸಮಯ, ಪ್ರಥಮ ಸಮಯದಲ್ಲಿ ಅನಾಹತನಾದಾನು ಸಂಧಾನ ವೆಂಬ ಜಂಗಮಲಿಂಗ ಹೃದಯ ಕಮಲವು ನೂರ ಎಂಟು ಚಿದ್ರುದ್ರಾಕ್ಷಿಗಳಿಂದ ಕುಂಭಕವಂ ಮಾಡಿದರೆ ಅಂದರೆ 108 ಮಾತ್ರೆಗಳಿಂದ ಪೂರಕಮಾಡಿದ್ದನ್ನು ಹೊರಗೆ ಬಿಡದಿರೋಣನೆ ಕುಂಭಕವು ಈ ಕಾಲದಲ್ಲಿ ಹೃದಯ ಕಮಲವು ಸೂಕ್ಷ್ಮವಾಗಿ ಅರಳಿವರೆ ಬಾಲಕರು ಸುಗಂಧ ದ್ರವ್ಯವನ್ನು ತೆಗದುಕೊಂಡು ಈ ಜಪಕಾಲ ಮುಗಿಯುವದರೊಳಗೆ ಬರುತ್ತಾರೆಂದು ತಿಳಿಯಬೇಕು. ಒಂದು ರಿಸಾ ಅರಳಿದರೆ ವಬ್ಬನು, ಎರಡುಸಾರಿ ಅರಳಿದರೆ ಇಬ್ಬರು ಈ ಪ್ರಕಾರ ತಿಳಿಯಬೇಕು. ದ್ವಿತೀಯಕಾಲದಲ್ಲಿ ಅರಳಿದರೆ ಕುಮಾರರು ತರುತ್ತಾರೆಂದು ತಿಳಿಯಬೇಕು. ತೃತೀಯಕಾಲದಲ್ಲಿ ಅರಳಿದರೆ ಯವ್ವನ ಸಮಯದವರು ತರುತ್ತಾರೆಂದು ತಿಳಿಯಬೇಕು. ಚತುರ್ಥ ಸಮಯದಲ್ಲಿ ಕಮಲ ಅರಳಿದರೆ ವೃದ್ಧರು ತರುವರೆಂದು ತಿಳಿಯಬೇಕು ಕಮಲವು ಘಡ್ ಘಡ್ ಯಂದು ತೀಕ್ಷ್ಣವಾಗಿ ಅರಳಿದರೆ ಅಶುಭವೆಂದು ಹೇಳಬೇಕು.

ಗುರುಲಿಂಗ ಜಪಕಾಲದಲ್ಲಿ ಸೂಕ್ಷ್ಮವಾಗಿ ಅರಳಿದರೆ ಪ್ರಥಮ ಸಮಯ ಬಾಲಕರು ಭೋಗ್ಯವಸ್ತುಗಳಂ ತರುವರೆಂ ಮ ದ್ವಿತಿಯ ಸಮಯ ಕುಮಾರರು ತೃತೀಯ ಸಮಯ ಯುವ್ವನಸ್ತರು ಚತುರ್ಥಸಮಯ ವೃದ್ಧರು ತರುವರೆಂದು ತಿಳಿಯಬೇಕು. ಶಿವಲಿಂಗ ಜಪಕಾಲದಲ್ಲಿ ಅರಳಿದರೆ ಪ್ರಥಮಸಯ ಬಾಲಕರು ದರ್ಶನ ಸ್ಪರ್ಶನ ಸಂಭಾಷಣೆಗಳಿಗೆ ಬರುವರೆಂದು ದ್ವಿತೀಯ ಸಮಯ ಕುಮಾರರು ತೃತೀಯ ಸಮಯ ಯುವ್ವನಸ್ತರು ಈ ಚತುರ್ಥ ಸಮಯದಲ್ಲಿ ವೃದ್ಧರು ಬರುವರೆಂದು ತಿಳಿಯಬೇಕು. ಜಂಗಮಲಿಂಗ ಜಪಕಾಲದಲ್ಲಿ ಅರಳಿದರೆ ಪ್ರಥಮ ಸಮಯ ಬಾಲಕರು ಧನಧಾನ್ಯಗಳನ್ನು ದ್ವಿತೀಯ ಸಮಯ ಕುಮಾರರು, ತೃತೀಯ ಸಮಯ ಯುವ್ವನಸ್ತರು ಚತುರ್ಥ ಸಮಯ ವೃದ್ಧರು ಆಯಾ ಜಪಕಾಲ ಮುಗಿಯುವದರೊಳಗೆ ಆಯಾಯ ಫಲಗಳು ದೊರಿಯುವದೆಂದು ತಿಳಿಯಬೇಕು. ಪ್ರಸಾದ ಲಿಂಗ ಜಪಕಾಲದಲ್ಲಿ ಅರಳಿದರೆ ಪ್ರಥಮ ಸಮಯ ಬಾಲಕರು ದ್ವಿತೀಯ ಸಮಯ ಕುಮಾರರು ತೃತೀಯ ಸಮಯ ಯುವ್ವನಸ್ತರು ಚತುರ್ಥ ಸಮಯ ವೃದ್ಧರು ಸಕಾಲದಲ್ಲಿ ಯಾವ ಇಚ್ಛೆ ಇದೆಯೋ ಅದರಂತೆ ಕೂಡಲೆ ಆಯಾಯ ಸಮಯದವರಿಂದ ಫಲವಾಗುವದು. ಮಹಲಿಂಗ ಜಪಕಾಲದಲ್ಲಿ ಸೂಕ್ಷ್ಮವಾಗಿ ಅರಳಿದರೆ ಇಚ್ಛಾಸಿದ್ಧಿಯು ದೊರಿಯುವದು, ಇದೇ ಅಂಕುರೋತ್ಪತ್ತಿಕಾಲ ಇದೇ ಬ್ರಾಹ್ಮಿ ಮುಹೂರ್ತ × ಈ ಮಂತ್ರವು ಲೋಮ ವಿಲೋಮವಾದಲ್ಲಿ ಪ್ರದೋಷಕಾಲವು × ಷಡ್ ಷಡ್ ಯುಂದು ಅರಳಿದರೆ ಅಶುಭವೆಂದು ತಿಳಿಯಬೇಕು.

ಬ್ರಹ್ಮಸೂತ್ರ ಪ್ರಥಮಾಧ್ಯಾಯ ದ್ವಿತೀಯ ಚರಣ
೭.ನೆ ಅಧಿಕರಣವಂ ನೋಡು.





ಪಂಚಪ್ರಣಮುಗಳು ಪಂಚಕೋಶಗಳನ್ನು ಆವರಣಮಾಡಿಕೊಂಡಿರುವವವು. ಷಟ್‌ಪ್ರಣಮುವು ಇವುಗಳಲ್ಲೆಲ್ಲಾ ವಾಶಿಶಿ ಸರ್ವಗತತ್ವವಂ ಹೊಂದಿರುವದು.

ಇದೇ ವಿಶುದ್ಧಿ ಚಕ್ರವೆಂಬ ಭಾವಚಕ್ರವಂ ನಿಲ್ಲಿಸಿ ಜಂಗಮ ವರ್ಣವಂ ತಿಳಿಸುವನು.

ಪ್ರ. ತೃ. ೧೩ನೆ ಅಧಿಕರಣ.

ಇಲ್ಲಿಗೆ ೮ ವರ್ಣವಾದವು.

## ಐ ಕ್ಯ ಸ್ಥ ಲ.

ಪೃಥ್ವಿ ಅಡಗುವದಕ್ಕೆ ಅಪ್ಪುವೇ ಆಶ್ರಯು, ಅಪ್ಪು ಅಡ ಗುವದಕ್ಕೆ ಅಗ್ನಿಯೇ ಆಶ್ರಯು. ಅಗ್ನಿ ಅಡಗುವದಕ್ಕೆ ವಾಯು ವೇ ಆಶ್ರಯು. ವಾಯು ಅಡಗುವದಕ್ಕೆ ಆಕಾಶವೇ ಆಶ್ರಯು. ಆಕಾಶ ಅಡಗುವದಕ್ಕೆ ಆತ್ಮನೇ ಆಶ್ರಯು. ಆತ್ಮ ಅಡಗುವದಕ್ಕೆ ಆದಿಯೇ ಆಶ್ರಯು. ಆದಿಯು ಅಡಗುವದಕ್ಕೆ ಅನಾದಿಯೇ ಆ ಶ್ರಯು ಅನಾದಿ ಅಡಗುವದಕ್ಕೆ ನಿರವಯುವೇ ಆಶ್ರಯು. ನಿರವ ಯು ಅಡಗುವದಕ್ಕೆ ಸೂನ್ಯವೇಆಶ್ರಯು. ಸೂನ್ಯ ಅಡಗುವದಕ್ಕೆ ನಿಜವೇ ಆಶ್ರಯು. ನಿಜವಡಗುವದಕ್ಕೆ ನಿನ್ನ ಹೃದಯ ಕಮಲ ವೇ ಆಶ್ರಯುವಾಗಿರುವದು.

ಸ ಸತ್ತು. ಭಕ್ತಿ ಸ್ಥಲ ಆಚಾರಲಿಂಗ ಬ್ರಹ್ಮಪೂಜಾರಿ ಭಕ್ತನಿಗೆ ಬ್ರಹ್ಮತ್ವವಿಲ್ಲ. ಯಾತಕ್ಕಂದರೇ ಶ್ರಿ ಷ್ಟಿಗೆ ಕರ್ತ ಬ್ರಹ. ಉತ್ಪತ್ತಿಗೆ ಕಲ್ಪಿತಕ್ಕೆ ಆದಿಯೇ ಬ್ರಹ್ಮ. ಯಜಮಾನ ಇಂಥ ಶ್ರಿಷ್ಟಿ ಉತ್ಪತ್ತಿ ಕಲ್ಪಿತವೇನು ಭಕ್ತನಲ್ಲಿ ಇರುವದಿಲ್ಲ. ನಿಸ್ಸಂಕಲ್ಪಿತಭಕ್ತ ನಿರಹಂಕಾರಿಭಕ್ತ. ಸತ್ತು ವೇ ಭಕ್ತ ಸದ್ಭಕ್ತ. ಈ ಭಕ್ತನಿಗೆ ಬ್ರಹ್ಮತ್ವಲ ಯು ಘಟದೊಳಗೆ ಆತ್ಮನಿದ್ದು ಆತ್ಮನೊಳಗೆ ಘ ಟ ಕಲ್ಪಿತ ವಿಲ್ಲಾ. ಪುಷ್ಪ ಪರಿಮಳದಂತೆ ತಿ ಳಿದುಪ್ಪ ಹೆಪ್ಪುಪ್ಪಾದಂತೆ ನೀರುಮುತ್ತಾದಂತೆ

ಮ ಚಿತ್ತು. ಮಹೇಶ ಸ್ಥಲ ಗುರುಲಿಂಗ ವಿಷ್ಣು ಪೂಜಾ ರಿ ಮಹೇಶನಿಗೆ ವಿಷ್ಣುತ್ವವಿಲ್ಲಾ. ಯಾತಕ್ಕಂ ದರೇ ಸಂರಕ್ಷಣೆಗೆ ಯುಜಮಾನ ಮೊದಲಿನವ.

ಇವನಲ್ಲಿ ಆಶಪರಿಪೂರ್ಣತ್ವ ವಿರುವವರಿಂವಲೇ ಉಂಡರೂ ಒಂದು ಕ್ಷಣಕ್ಕೆ ಉಪವಾಸ, ಬಳಸಿಯು ಒಂದು ಕ್ಷಣಕ್ಕೆ ಬ್ರಹ್ಮಚಾರಿ ಇವನು ಆಶಾ ವಿಶೇಷದಿಂದ ಪಾಪುನ ನಾದನು. ಇಂಥಾ ಉಪಾಧಿಯು ಮಹೇಶನಲ್ಲಿ ಇರುವದಿಲ್ಲಾ. ನಿಶ್ಚಲ ಚಿತ್ತ ಮಹೇಶ. ಈ ಮಹೇಶನಿಗೆ ವಿಷ್ಣುಲಯ ಆಶಿಯುಂಬ ಸಂಸಾರ ಸಾಗರದೊಳಗೆ ನಿರಾಶೀ ಕ್ಷಮೆ ಯುಂಬ ಹಡಗವಿದ್ದು ಹಡಗ ದೊಳಗೆ ಸಾಗರ ವಿಲ್ಲ. ನೀರಲ್ಲಿ ಕಮಲ ವಿದ್ದರು ಕಮಲಕ್ಕೆ ನೀರು ಅಂಟಿದಂತೆ ರಸನ ಘೃತದಂತೆ.

ಶಿ ಆನಂದ — ಪ್ರಸಾದ ಸ್ಥಲ ಶಿವಲಿಂಗೆ ರುದ್ರಪೂಜಾರಿ ಪ್ರಸಾದಿಗೆ ರುದ್ರತ್ವವಿಲ್ಲಾ ಯಾತಕ್ಕಂದರೇ ಲಯಕ್ಕೆ ಈ ರುದ್ರನೇ ಕರ್ತ. ಯಜಮಾನ ಆದಿ ಮೊದಲು ಲಯವಾಗುವದೇ ಶಿಟ್ಟು. ಈ ಪ್ರಸಾದಿಯಲ್ಲಿ ಶಿಟ್ಟು ಇರುವದಿಲ್ಲಾ. ಯಾತಕ್ಕಂದರೇ—ವಿಷವಮೃತಸಮಾನ, ಶತೃಮಿತ್ರ ಸಮಾನ, ಸುಖ ದುಃಖಸಮಾನವಾದ ಶಾಂತೇಶ್ವರನಾದ್ದರಿಂದ ಪ್ರಸಾದಿಗೆ ರುದ್ರಲಯ ಕಟ್ಟಿಗೆಯಲ್ಲಿ ಬೆಂಕಿ ಇದ್ದಾಗ್ಯೂ ಬೆಂಕಿಯಲ್ಲಿ ಕಟ್ಟಿಗೆ ಇಲ್ಲಾ. ಕಲ್ಲಿನಲ್ಲಿ ವಜ್ರವಿದ್ದಾಗ್ಯೂ ವಜ್ರದಲ್ಲಿ ಕಲ್ಲು ಇಲ್ಲಾ.

೮ ನಿತ್ಯ ಪ್ರಾಣಲಿಂಗಿ ಜಂಗಮಲಿಂಗ ಈಶ್ವರ ಪೂಜಾರಿ ಪ್ರಾಣಲಿಂಗಿಗೆ ಈಶ್ವರನಿಲ್ಲ. ಯಾತಕ್ಕಂದರೆ ಮಾಯಾಮಯಕ್ಕೆ ಈಶ್ವರನೇ ಯಜಮಾನ ಇಂಥಾ ಮಾಯಾಮಯತ್ವವು ಪ್ರಾಣಲಿಂಗಿಗೆ ಇರುವದಿಲ್ಲ. ದ್ವೈತದೊಳಗೆ ಅದ್ವೈತ ವಿದ್ದಾಗ್ಯೂ, ಅದ್ವೈತ ದೊಳಗೆ ದ್ವೈತಭಾವವಿಲ್ಲಾ. ಆದ್ದರಿಂದನಿತ್ಯತ್ವವಾದ ಪ್ರಾಣಲಿಂಗಿಗೆ ಈಶ್ವರಲಯ.

೯ ಪರಿಪೂರ್ಣ ಶರಣಸ್ಥಲ ಪ್ರಸಾದಲಿಂಗ ಸದಾಶಿವ ಪೂಜಾರಿ ಈ ಶರಣನಿಗೆ ಸದಾಶಿವನೇ ಇಲ್ಲಾ. ಯಾತಕ್ಕಂದರೇ ಧ್ಯಾತೃ ಧ್ಯಾನ ಧ್ಯೇಯಕ್ಕೆ ಸದಾ ಶಿವನೇ ಕರ್ತು ಇಂಥಾ ಧ್ಯಾತೃ ಧ್ಯಾನ ಧ್ಯೇಯತ್ವವು ಶರಣನಿಗೆ ಇರುವದಿಲ್ಲಾ ಭಾವದೊಳಗೆ ಅಭಾವವಿದ್ದಾಗ್ಯೂ ಅಭಾವದೊಳಗೆ ಭಾವವಿಲ್ಲಾ ಆದ್ದರಿಂದ ಪರಿಪೂರ್ಣನಾದ ಶರಣನಿಗೆ ಸದಾಶಿವಲಯ.

೧೦. ಅವಿರಳ ಐಕ್ಯಸ್ಥಲ ಮಹಾಲಿಂಗ ಪರಶಿವ ಪೂಜಾರಿ ಈ ಐಕ್ಯನಿಗೆ ಪರವಸ್ತುವೇ ಇಲ್ಲ. ಯಾತಕ್ಕಂದರೆ ಜ್ಞಾತೃ ಜ್ಞಾನ ಜ್ಞೇಯಗಳು ಐಕ್ಯನಿಗೆ ಇರುವದಿಲ್ಲ. ಅಪ್ರಕಾಶದೊಳಗೆ ಸ್ವಪ್ರಕಾಶ ವಿದ್ದಾಗ್ಯೂ ಸ್ವಪ್ರಕಾಶದೊಳಗೆ ಅಪ್ರಕಾಶವಿಲ್ಲ. ಆದ್ದರಿಂದ ಅವಿರಳನಾದ ಐಕ್ಯನಲ್ಲಿ ಪರವಸ್ತು ಲಯ.



ಓಂ

ಇದೇ ಆಜ್ಞಾ ಚಕ್ರವೆಂಬ ಜ್ಞಾನ ಚಕ್ರವಂ ನಿಲ್ಲಿಸುವದು.

ಗುರುವಿನ ಗುರು ಪರಮಗುರು ಪರಮಾರಾಧ್ಯ ಗುರುವಿನ ಮಂಗಲ ಏನೊಂದಿಲ್ಲದುದೆ ನೀನೆಂದು ಮಾತಾಡದೇ ಸುಮ್ಮನೆ ಕೂತು ತೋರಿಸುವ ಸೌಜ್ಞಯುಳ್ಳ ಸಾಕ್ಷೀರೂಪವಾದ ಶಿವಾನುಭವ ಚರವರಾದ್ಯಕ್ಷ ನಿರಂಜನ ಶ್ರೀ ಶಂಕರ ಸ್ವಾಮಿಗೆ ನಮಸ್ಕಾರ.

ಬ್ರ. ತೃ. ಚ. 14ನೆ ಅಧಿಕರಣವನ್ನು ನೋಡು.

## । ವೇದಾಂತ ಪ್ರಶ್ನೋತ್ತರ ।

| | |
|---|---|
| ೧ ಬ್ರಹ್ಮಯಾವುದು ಆದರ ಭಾವ ಅಂದರೆ ರೂಪುಯಾವ್ರದು, | ೧ ಪ್ರಜ್ಞಾನಂಬ್ರಹ್ಮ ರೂಪು ನಿರೂಪು ಪ್ರಮಾಣ ಮಹಾವಾಕ್ಯ. |
| ೨ ಪ್ರಪಂಚ ಯಾತಕ್ಕೋಸ್ಕರ ನಿರ್ಮಿತವಾಯಿತು, | ೨ ಜೀವನಿಗೋಸ್ಕರ ನಿರ್ಮಿತವಾಯಿತು. |
| ೩ ಸ್ತ್ರೀಪುರುಷರನ್ಯಾತಕ್ಕೋಸ್ಕರ ನಿರ್ಮಿಸಿದನು, | ೩ ಪ್ರಪಂಚಉದ್ಧಾರಕ್ಕೋಸ್ಕರ. |
| ೪ ಪರಮಾತ್ಮನನ್ನು ಜೀವಾತ್ಮ ತಿಳಿಯುವಬಗೆಹ್ಯಾಗೆ, | ೪ ಸದ್ಗುರು ಶೇವೆಯಿಂದ. |
| ೫ ಮನಸ್ಸು ಬ್ರಹ್ಮನನ್ನಂಟಸುವದು ಹ್ಯಾಗೆ, | ೫ ನಿಶ್ಚಯ ಜ್ಞಾನದಿಂದ. |
| ೬ ಗುರುಯಾರು, | ೬ ಸಂಶಯ ನಿವಾರಕನು. |
| ೭ ಶಿಷ್ಯಯಾರು, | ೭ ನಾನೆಂಬ ಅಭಿಮಾನವ ಕಳೆದವನು. |
| ೮ ಗುರುವಿನ ಗುಣವೇನು, | ೮ ೬ ಉತ್ತರ. |
| ೯ ತನ್ನಲ್ಲಿ ಉಂಟಾದಬಾಧಕ ತನಗೆ ತೋರದಿರುವಕಾಲ ಯಾವದು. | ೯ ಸುಷುಪ್ತಿಕಾಲ. |
| ೧೦ ಸುಖಯಾವುದು, | ೧೦ ನಿರಾಶ. |
| ೧೧ ದುಃಖಯಾವದು, | ೧೧ ಆಶ. |
| ೧೨ ತಿಳಿದಿದ್ದಕ್ಕೇನು ಗುರ್ತು. | ೧೨ ಅವಮಾನಕಾಲದಲ್ಲಿ ಸುಖನಿಶಿತ. |

| | |
|---|---|
| ೧೩ ಹ್ಯಾಗಿದ್ದರೆ ನಿಜಸುಖ. | ೧೩ ಮೌನವಾಗಿದ್ದರೆ. |
| ೧೪ ರಣಧೀರ ಅನ್ನುತ್ತಾರೆ ರಣಯಾವದು, | ೧೪ ಸಂಸಾರದೊಳಗಿದ್ದರು ಇಲ್ಲದಹಾಗಿರುವದು. |
| ೧೫ ರುಣಶುಚಿ ಯಾವುದು, | ೧೫ ಪ್ರಾರಬ್ಧ ಬಿಡುಗಡೇ. |
| ೧೬ ಯಾರಿಗೆ ಮುಕ್ತಿ, | ೧೬ ಬಯಕೆಯವನಿಗೆ. |
| ೧೭ ಸತ್ತನೆನ್ನುತ್ತಾರೆ ದೇಹದಲ್ಲಿ ಸತ್ತವರ್ಯ್ಯಾರು, | ೧೭ ವಿದೇಹ ಕೈವಲ್ಯ ಅಂದರೆ ದೇಹಾಭಿಮಾನವಂ ತ್ಯಜಿಸಿದವನು ಪದ್ಮಪತ್ರನ ನ್ಯಾಯ. |
| ೧೮ ನನ್ನದೆಂಬಭಿಮಾನ ಯಾತರಿಂದ ಹುಟ್ಟುತ್ತೆ, | ೧೮ ಆಶೆಯಿಂದ. |
| ೧೯ ಮೋಹವಿಸರ್ಜನ ಯಾವುದು, | ೧೯ ಒಸ್ತು. |
| ೨೦ ಭಯವಿಸರ್ಜನೆ ಹ್ಯಾಗೆ, | ೨೦ ನಂಬಿಕೆಯಿಂದ. |
| ೨೧ ತನಗೆ ಸುತ್ತುವ ಪಾಶ ಬಿಡುಗಡೆಕಾಲಯಾವದು, | ೨೧ ವೈರಾಗ್ಯ. |
| ೨೨ ಶ್ರವಣ ಯಾವುದು, | ೨೨ ಸದ್ಗುರು ಉಪದೇಶ ಶ್ರದ್ಧಾಭಕ್ತಿ. |
| ೨೩ ಮನನ ಯಾವುದು, | ೨೩ ನಂಬಿಕೆ ನಿಶ್ಚಲಚಿತ್ತ ನೈಷ್ಟಿಕ ಭಕ್ತಿ. |
| ೨೪ ನಿಧಿಧ್ಯಾಸ ಯಾವುದು, | ೨೪ ನಿಶ್ಚಯಸಾವಧಾನಭಕ್ತಿ. |
| ೨೫ ಹ್ಯಾಗಿದ್ದರೆ ಯಮ, | ೨೫ ಶ್ವಾಸವಂ ತಡಿಯೋಣ. |
| ೨೬ ನೇಮ ಹ್ಯಾಗೆ, | ೨೬ ಬಿಡದೆ ಇರೋಣ. [ಣ |

| | |
|---|---|
| ೨೭ ತ್ಯಾಗ ಹ್ಯಾಗೆ, | ೨೭ ನನ್ನದಲ್ಲೆಂದು ಕೊಡೋ |
| ೨೮ ಮೌನ ಹ್ಯಾಗೆ, | ೨೮ ಏನು ತೆಗದುಕೊಂಡಾಗ್ಯು ಸುಮ್ಮನಿರೋಣ. |
| ೨೯ ಉಪದೇಶ ಹ್ಯಾಗೆ, | ೨೯ ಇಹಲೋಕದಲ್ಲಿದ್ದಾಗ್ಯು ಪರಮಾರ್ಥ ವೆಂಬ ಪರಲೋಕದಜ್ಞಾನವಂಬೋಧಿಸೋಣ ಅದರಂತೆ ನಡಿಯೋಣ. |
| ೩೦ ಕಾಲಹ್ಯಾಗೆ, | ೩೦ ಉದಯ, ಮಧ್ಯಾಹ್ನ, ಸಾಯಂಕಾಲ ವಿಲ್ಲದ ಸಮಕಾಲ. |
| ೩೧ ಆಸನ ಎಂಥಾದ್ದು, | ೩೧ ಶೇಷಅಂದರೆ ಕಳದುಳಿದದ್ದು. |
| ೩೨ ಪ್ರಾಣಯಾಮ, | ೩೨ ಚಿತ್ತನಿರೋಧ. |
| ೩೩ ರೇಚಕ, | ೩೩ ಪ್ರಪಂಚ ಬಿಡುಗಡೆ. |
| ೩೪ ಪೂರಕ, | ೩೪ ಬ್ರಹ್ಮನಂ ಕೂಡೋಣ. |
| ೩೫ ಕುಂಭಕ, | ೩೫ ಎಂದೆಂದಿಗೂ ಅಗಲದೆ ಇರೋಣ. |
| ೩೬ ಧಾರಣ ಹ್ಯಾಗೆ, | ೩೬ ತೈಲಧಾರಾವತ್ಸ್ವರೂಪ. |
| ೩೭ ಆತ್ಮಧ್ಯಾನ ಯಾವುದು, | ೩೭ ಕಾಣದೆ ಕಂಡು ಕೇಳದೆ ಕೇಳುತ್ತಿರುವದು. |
| ೩೮ ಜಾಗ್ರ ಯಾವುದು, | ೩೮ ದೂರದರ್ಶನದೂರಶ್ರವಣ |
| ೩೯ ಸ್ವಪ್ನ ಯಾವದು, | ೩೯ ಪ್ರಪಂಚವಂ ಇಂದ್ರಜಾಲದಂತೆ ಕಾಂಬೋಣ. |
| ೪೦ ಸುಷುಪ್ತಿ ಯಾವುದು, | ೪೦ ನಿಜಸುಖ. |

| | | | |
|---|---|---|---|
| ೪೧ | ತ್ವಂ, .... | ೪೧ | ಸತ್. |
| ೪೨ | ತತ್ಪದ, .... | ೪೨ | ಚಿತ್. |
| ೪೩ | ಅಶಿಪದ .... | ೪೩ | ಆನಂದ. |
| ೪೪ | ಶ್ರವಣ .... | ೪೪ | .... ೨೨ } ನೇ ಕಲಂನೋಡು. |
| ೪೫ | ಮನನ .... | ೪೫ | .... ೨೩ |
| ೪೬ | ನಿಧಿಧ್ಯಾಸ ಯಾವುದು, | ೪೬ | .... ೨೪ |
| ೪೭ | ಸಗುಣ ಯಾವುದು | ೪೭ | ಪ್ರಪಂಚವೆಲ್ಲಾ ತಾನೆಂಬುವದು. |
| ೪೮ | ನಿರ್ಗುಣ ಯಾವುದು, | ೪೮ | ಪ್ರಪಂಚವೇನು ತನಗಂಟಿಲ್ಲ ವೆಂಬುದು. |
| ೪೯ | ಒಂದುವಸ್ತುವಿಗೆ ಎರಡು ಹೆಸರು ಹ್ಯಾಗೆ ಬಂತು, | ೪೯ | ತನ್ನ ಸಂಕಲ್ಪದಿಂದ. |
| ೫೦ | ಮನೋನಾಶಕ್ಕೆ ಕಾಲ ಯಾವದು | ೫೦ | ಸುಷುಪ್ತಿ ೧ನೇದು, ಜ್ಞಾನ ೨ನೇದು. |
| ೫೧ | ವಾಸನಕ್ಷಯವಾಗುವದು | ೫೧ | ನನ್ನದೆಂಬಭಿಮಾನ ಇಲ್ಲದೆ ಹೋದರೆ ದೇಹವಾಸನ ಶಾಸ್ತ್ರವಾಸನ ಲೋಕವಾಸನ ಅಳಿಯುವವು ನಿರಾಶ. |
| ೫೨ | ಸತ್ವಗುಣ, .... | ೫೨ | ಯಾವಾಗ್ಯೂ ಇರುವದು ಕ್ಷಮ. |
| ೫೩ | ರಜೋಗುಣ, | ೫೩ | ಕ್ರೂರತ್ವ. |
| ೫೪ | ತಮೋಗುಣ, | ೫೪ | ಮೂಢತ್ವ. |
| ೫೫ | ಜನ್ಮಕ್ಕೆ ಬೀಜಯಾವುದು, | ೫೫ | ವಿರ್ಯಪರಂಪರೆ. |

| | | | |
|---|---|---|---|
| ೫೬ | ಭವವೀಜ ನಾಶವಾಗುವ | ೫೬ | ಏನೊಂದು ಇಲ್ಲದುದರಲ್ಲಿ ಸ್ಮರಣ. |
| ೫೭ | ಅಹಂ ಅಳಿವುದು ಹ್ಯಾಗೆ, | ೫೭ | ಬಿಕ್ಷೆಯಿಂದ. |
| ೫೮ | ಶಿದ್ವಾಸನೆ ಹ್ಯಾಗೆ. | ೫೮ | ಬ್ರಹ್ಮಾಪೇಕ್ಷೆ. |
| ೫೯ | ಜೀವ ಭಾವ ನಾಶವಾಗುವದು ಹ್ಯಾಗೆ | ೫೯ | ತಾನೀಶ ನೆಂದಲ್ಲಿ. |
| ೬೦ | ಪುಣ್ಯಬಂತು ಅನ್ನುತ್ತಾರೆ ದೇಹಕ್ಕೋ ಜೀವಕ್ಕೋ | ೬೦ | ಪಾಪವೇ ದೇಹ, ಪುಣ್ಯವೇ ಜೀವ, ಪಾಪಸುಡುವದು, ಪುಣ್ಯಸುಡುವದಿಲ್ಲ |
| ೬೧ | ಸ್ವಾಸ ನಿಸ್ವಾಸಗಳು ಅಕ್ಷರಗಳನ್ನು ಹ್ಯಾಗೆ ಸುಡಿಯುವವು, | ೬೧ | ಶಕ್ತಿ ಸಹಾಯದಿಂದ. |
| ೬೨ | ನಾಮರೂಪು ಸತ್ಯವೋ ಮಿಥ್ಯವೋ, | ೬೨ | ಇಂದ್ರಜಾಲದಂತೆ ಸತ್ಯವಾದಾಗ್ಯೂ ಮಿಥ್ಯವೇ. |
| ೬೩ | ಮೋಕ್ಷಸತ್ಯವೋ ಮಿಥ್ಯ ಮಿಥ್ಯವೋ, | ೬೩ | ಮಿಥ್ಯವೇ. |
| ೬೪ | ಹೊಲೆಯರೆಂತಾರೆಯಾರಿಗೆ | ೬೪ | ಕ್ಯಾರನಿಗೆ. |
| ೬೫ | ಪಾಪಿ ಪುರುಷಯಾರು, | ೬೫ | ಅಜ್ಞಾನಿ. |
| ೬೬ | ಉತ್ತಮಪುರುಷಯಾರು | ೬೬ | ಜ್ಞಾನಿ. |
| ೬೭ | ಆತ್ಮನಿಗೆರೂಪುಯಾವುದು, | ೬೭ | ಅಣುರೂಪು. |
| ೬೮ | ಅಧಮ ಯಾರು, | ೬೮ | ಜೀವಾತ್ಮ. |
| ೬೯ | ಮಧ್ಯಮ ಯಾರು, | ೬೯ | ಅಂತರಾತ್ಮ. |
| ೭೦ | ಉತ್ತಮ ಪುರುಷಯಾರು | ೭೦ | ಪರಮಾತ್ಮ. |
| ೭೧ | ತಿಳುವಿಕೆ ಸತ್ಯವೋ ಮಿಥ್ಯವೋ, | ೭೧ | ಸತ್ಯವು. |

| | |
|---|---|
| ೭೨ ಉತ್ತಮಸುಕೃತಯಾರು | ೭೨ ಯಲ್ಲವಂಬಿಟ್ಟವನು. |
| ೭೩ ತ್ರಿಗುಣರಹಿತ ಪರಮಾತ್ಮ ನ್ಯಾರು, | ೭೩ ೪೮-ನೇ ಉತ್ತರ. |
| ೭೪ ತ್ರಿಗುಣಾತ್ಮಕ ಪರಮಾ ತ್ಮನ್ಯಾರು, | ೭೪ ೪೭-ನೇ ಉತ್ತರ. |
| ೭೫ ಏನು ಬಿಟ್ಟರೆ ಪ್ರಪಂಚ ಬಿಟ್ಟಹಾಗಾಯ್ತು, | ೭೫ ಅಭಿಮಾನ ಬಿಟ್ಟರೆ |
| ೭೬ ಮದಹೆಚ್ಚುವದು ಯಾತ ರಿಂದ, | ೭೬ ಜೀವನು ಅಂಹಾಯದಳ ಸಂಚಾರದಿಂದ. |
| ೭೭ ಶಿವನ ಐಕ್ಯವುಂಟಾಗುವ ದು ಹ್ಯಾಗೆ, | ೭೭ ಜೀವನ ಗುಣ ಬಿಡುವದ ರಿಂದ. |
| ೭೮ ದುರ್ಗುಣ ಯಾತರಿಂದ ಹುಟ್ಟುತ್ತೆ, | ೭೮ ಆಶಿಯಿಂದ. |
| ೭೯ ತನ್ನಹೆಂಡತಿ ತನಗೆ ಏನಾ ಗಬೇಕು. | ೭೯ ಮೃತ್ಯು ಆಗಬೇಕು ತಿಳಿ ದರೆಮೋಕ್ಷಾಂಗಹೋಗೆಬೇಕು |
| ೮೦ ತಾನು ಶಂಕರ ನಾಗುವ ದು ಹ್ಯಾಗೆ, | ೮೦ ಸರ್ವಸಮ ಭಾವನೆಇಂದ. |
| ೮೧ ಬಂಧುಗಳ ಯೋಗ್ಯತಾ ಪ್ರಕೃತಿ ತಿಳಿಯುವದು ಯಾವದು. | ೮೧ ಆಪತ್ಕಾಲದಲ್ಲಿ. |
| ೮೨ ಬಂಟನ ಗುಣಾವಳಿ ತಿಳಿ ಯುವಕಾಲ ಯಾವುದು, | ೮೨ ತಾನಿಲ್ಲದ ಕಾಲದಲ್ಲಿ. |
| ೮೩ ಹೆಂಡತಿ ಗುಣ ತಿಳಿಯು ವಕಾಲ ಯಾವುದು, | ೮೩ ಗಂಡನು ನಾಳೆ ಸಾಯು ತ್ತಾನೆಂದು ತಿಳಿದಕೂಡ್ಲೆ ಹೆಂಡತಿ ಈದಿನವೆ ಸಾಯೋಣ |

| | | | |
|---|---|---|---|
| ೭೪ | ಜಗತ್ತೆಲ್ಲಿ ತಾನೆಂಬುವದು ಯಾತರಿಂದಾಯಿತು, | ೭೪ | ಸರ್ವಸಮಾನವೆಂಬ ತಿಳಿವಿಕೆಯಿಂದಾಯಿತು. |
| ೭೫ | ಜ್ಞಾನ ಅಂದರೆ ಯಾರು, | ೭೫ | ಬ್ರಹ್ಮಪ್ರಜ್ಞಾನಂಬ್ರಹ್ಮ |
| ೭೬ | ದೇವರನ್ನು ಬಲ್ಲವರಾರು, | ೭೬ | ತನ್ನತಾ ತಿಳುಕೊಂಡರೆ ದೇವರೆಂತಾಯ್ತು. |
| ೭೭ | ದುರ್ಗುಣ ಉಡುಗುವದು ಹ್ಯಾಗೆ. | ೭೭ | ಸತ್ಸಂಗದಿಂದ. |
| ೭೮ | ನಾಚಿಕೆ ಬಿಡುವದುಹ್ಯಾಗೆ | ೭೮ | ಬಿಕ್ಷ ಬೇಡುವದರಿಂದ. |
| ೭೯ | ಆತ್ಮಗುಟ್ಟು ತಿಳಿಯುವ ಬಗೆ ಹ್ಯಾಗೆ, | ೭೯ | ಸದ್ಗುರು ಶೇವೆಯಿಂದ. |
| ೮೦ | ನಿಶ್ಚಯಜ್ಞಾನ ಹುಟ್ಟುವ ಬಗೆ ಹ್ಯಾಗೆ, | ೮೦ | ನಂಬಿಕೆಯಿಂದ ವಿಚಾರದಿಂದ. |
| ೮೧ | ತನಗೆ ಮೊದಲಿನ ಗುರು ಯಾರು, | ೮೧ | ತಂದಿತಾಯಿ. |
| ೮೨ | ಏನುತಿಳಿದರೆಸ್ವಾನುಭೂತಿ | ೮೨ | ತಾನಾರೆಂದು ತಿಳಿದರೆ. |
| ೮೩ | ಪರಮಗುರುಯಾರು, | ೮೩ | ನಿಜಸುಖದಲ್ಲಿಮುರ್ಗಿದವ |
| ೮೪ | ಮಂತ್ರ ಸ್ಥಿಮಿತಕ್ಕೆ ನಿಲ್ಲುವಬಗೆ ಹ್ಯಾಗೆ. | ೮೪ | ಮನನಂ ತ್ರಾಯ ತೇಯಸ್ಮಾ ತಸ್ಮಾನ್ಮಂತ್ರ ಮಿತಿಸ್ಮೃತಂ ಮನಸ್ಥಿಮಿತವೆ. |
| ೮೫ | ಬ್ರಹ್ಮನಂ ತಿಳಿಯುವ ಬಗೆಹ್ಯಾಗೆ, | ೮೫ | ೮೨-೯ ಕಲ್ಮನೋಡು. |
| ೮೬ | ಜಗತ್ತಿಗೆಆದಿಗುರುಯಾರು | ೮೬ | ಸ್ವಜ್ಞಪ್ತಿಮಾತ್ರನು. |
| ೮೭ | ತನಗೆ ತಂದೆಯಾರು, | ೮೭ | ತನಗೆ ತಾನೇ ತಂದಿ. |

| | |
|---|---|
| ೯೮ ತನಗೆ ತಾಯಿಯಾರು, | ೯೮ ತನಗೆ ತಾನೇ ತಾಯಿ. |
| ೯೯ ಮನಸ್ಸು ನಿಲ್ಲುವದುಹ್ಯಾಗೆ | ೯೯ ಚಲನ ಚಿತ್ತವಂ ನಿರೋಧ ಪಡಿಸೋಣ. |
| ೧೦೦ ಕಂಡವನಿಗಿಂತ ಅಧಿಕನ್ಯಾರು, | ೧೦೦ ಕಾಣಿಸಿಕೊಂಡವನು. |
| ೧೦೧ ಬಂಧಕ ಯಾರಿಗೆ, | ೧೦೧ ಆಶೆಯುಳ್ಳವನಿಗೆ. |
| ೧೦೨ ಅನ್ಯರಲ್ಲಿ ತಪ್ಪು ಹುಡುಕುವದು ಯಾತರಿಂದ | ೧೦೨ ತನ್ನ ದುರ್ಗುಣದಿಂದ. |
| ೧೦೩ ವಾಕ್ಕಿಂತ ಹೆಚ್ಚಾದುದಾವದು, | ೧೦೩ ನಿಧಾನವು. |
| ೧೦೪ ಜಗತ್ತಿಗೆ ಮೂಲಪದಾರ್ಥ ದಾವದು, | ೧೦೪ ನಿತ್ಯಂಕಲ್ಪದಿಂದ ಈಶ, ಈತನ ಸಂಕಲ್ಪದಿಂದ ಜಗತ್ತು. |
| ೧೦೫ ಯಾರಿಗೆ ಮೋಕ್ಷ, | ೧೦೫ ೧೬ನೇ ಕಲ್ಮು ನೋಡು |
| ೧೦೬ ಪುಣ್ಯಪಾಪ ಸುಳ್ಳೋ ನಿಜ ವೋ, | ೧೦೬ ಇಂದ್ರಜಾಲದಂತೆ. |
| ೧೦೭ ದೇವರ ಪೂಜ್ಯೆಯಲ್ಲಿ ಏನುಫಲ, | ೧೦೭ ೮೬ನೇ ಉತ್ರ. |
| ೧೦೮ ಕೋಪಉಡುವದುಹ್ಯಾಗೆ | ೧೦೮ ಬೇಡುವಿಕೆಯಿಂದ. |
| ೧೦೯ ಬ್ರಹ್ಮಾನಂದದಲ್ಲಿ ಇಷ್ಟ ನಿಲ್ಲುವದು ಹ್ಯಾಗೆ, | ೧೦೯ ಅನುಭವದಿಂದ ಶ್ರದ್ಧೆ ಇಂದ. |
| ೧೧೦ ಲೋಕದಲ್ಲಿ ಜಾಣನೆನ್ನುತ್ತಾರೆ ಯಾರಿಗೆ, | ೧೧೦ ಸುಖ ದುಃಖಗಳಂಟದೆ ಸಾಕ್ಷಿಯಾಗಿರುವವನು ಮತ್ತು ಅವರವರಂತೆ ನಡಿಯುವವನಿಗೆ. |

| | | | |
|---|---|---|---|
| ೧೧೧ | ಕಂಠಕ ಮುಂತಾದ್ದು ಸಂಹರಿಸುವವರುಯಾರು, | ೧೧೧ | ಗುರುವು. |
| ೧೧೨ | ಅರಿವು ಮರವೆ ಯಾರಿಗೆ | ೧೧೨ | ಜ್ಞಾ ಅಜ್ಞಾನಿಗೆ. |
| ೧೧೩ | ತನ್ನ ಹುಡುಕಿನೋಡಿದರೆ ತಾನು ಯಾರಾಗಿದ್ದಾನೆ, | ೧೧೩ | ಏನು ಇಲ್ಲದವನಾಗಿ ಇದ್ದಾನೆ. |
| ೧೧೪ | ಉತ್ತಮೋತ್ತಮ ನೆಸ್ನುತ್ತಾರೆ ಯಾರಿಗೆ, | ೧೧೪ | ತನ್ನತಾತಿಳಿದವನಿಗೆ. |
| ೧೧೫ | ತನ್ನತಾ ತಿಳಿಯುವಬಗೆ ಹ್ಯಾಗೆ, | ೧೧೫ | ತತ್ವ ವಿಮರ್ಶನೆಇಂದ. |
| ೧೧೬ | ನಾಶರಹಿತವಸ್ತು ಯಾವುದು, | ೧೧೬ | ಬ್ರಹ್ಮ. |
| ೧೧೭ | ತತ್ವತಿಳಿದವನಿಗೆ ಏನು ಫಲ, | ೧೧೭ | ತಾ ನೀಶನಾದ್ದೇ ಫಲ ಫಲ, |
| ೧೧೮ | ಧ್ಯಾನಕ್ಕಿಂತ ಹೆಚ್ಚಾದ್ದು ಯಾವುದು, | ೧೧೮ | ಧ್ಯಾನಾರ್ಹವಾದ್ದು. |
| ೧೧೯ | ಜ್ಞಾನಕ್ಕೆ ವಿಘ್ನತ್ರಯ ನಿವಾರಣೆ ಯಾಗುವದು ಹ್ಯಾಗೆ, | ೧೧೯ | ವೈರಾಗ್ಯದಿಂದ. |
| ೧೨೦ | ಪೂಜೆಗಿಂತ ಅಧಿಕ ಯಾವುದು, | ೧೨೦ | ಪೂಜಿಸಿಕೊಳ್ಳತಕ್ಕದ್ದು |
| ೧೨೧ | ಭಕ್ತಿಹುಟ್ಟುವಬಗೆಹ್ಯಾಗೆ | ೧೨೧ | ವಾಸನತ್ರಯಅಳಿದರೆ. |
| ೧೨೨ | ಹ್ಯಾಗಿದ್ದರೆ ಚಿರಂಜೀವಿ | ೧೨೨ | ಸ್ವಾಸವಂ ಬಲಿಸಿದರೆ. |

| | | | |
|---|---|---|---|
| ೧೨೩ | ಹ್ಯಾಗಾದರೆ ಜ್ಞಾನವು ಹುಟ್ಟುತ್ತೆ. | ೧೨೩ | ಮನೆಠಯಂ ಕಳ ಪುತ್ರ ಮಿಥ್ಯಗದ ಮ ತಿಳಿದರೆ. |
| ೧೨೪ | ಏನು ಸುಟ್ಟರೆ ಭಸಿತ, | ೧೨೪ | ಚಿತ್ತವಂ ಸುಟ್ಟರೆ. |
| ೧೨೫ | ವೈರಾಗ್ಯ ಹುಟ್ಟುವ ಬಗೆ ಹ್ಯಾಗೆ, | ೧೨೫ | ಸತಿ ಸುತಮಿತ್ರರಂ ಳೈಂದು ತಿಳಿದರೆ. |
| ೧೨೬ | ಭಯಯಾವುದು, | ೧೨೬ | ಅಜ್ಞಾನ. |
| ೧೨೭ | ವಿವೇಕ ಹುಟ್ಟುವದು ಹ್ಯಾಗೆ, | ೧೨೭ | ಸರ್ವಜೀವರೊಳ್ ತಾನಿದ್ದೇನೆಂದು ತನ ಳಗೆ ಸರ್ವವು ಇದೇಂ ದು ತಿಳಿದರೆ. |
| ೧೨೮ | ಬ್ರಹ್ಮಜಿಜ್ಞಾಸದ ಮತಿಗಿಂತ ಅಧಿಕದಾವುದು, | ೧೨೮ | ಬ್ರಹ್ಮ. |
| ೧೨೯ | ಹ್ಯಾಗಾದರೆ ನಿಶ್ಚಯ ಹುಟ್ಟುತ್ತೆ | ೧೨೯ | ತಿಳಿದು ನೋಡಿದರೆ. |
| ೧೩೦ | ಅಷ್ಟಾಂಗಯೋಗವನ್ನು ಆಚರಿಸುವದುಯಾತಕ್ಕೆ | ೧೩೦ | ಪರಿಶುದ್ಧನಾಗುವದ |
| ೧೩೧ | ಶಾಂತಿ ಹುಟ್ಟುವದು ಹ್ಯಾಗೆ, | ೧೩೧ | ತಿಳಿದರೆ. |
| ೧೩೨ | ಕುಲಕ್ಕಿಂತ ಹೆಚ್ಚಾದುದು ದಾವುದು, | ೧೩೨ | ಶಿವಕುಲ. |
| ೧೩೩ | ಹ್ಯಾಗಿದ್ದರೆ ಯೋಗಿ, | ೧೩೩ | ವಾಕ್ಸಿದ್ಧಿ ಇದ್ದರೆ. |
| ೧೩೪ | ಶಮಅಳವಡುವದು ಹ್ಯಾಗೆ, | ೧೩೪ | ...ನ್ನೇ ಉತ್ತರ |

